ಮನೋಹರ ಗ್ರಂಥ ಮಾಲೆಯ ೬೧ ನೆಯ ಕುಸುಮ

# ಹೂವಿನ ಹಾಸಿಗೆ

(ಸಣ್ಣ ಕತೆಗಳ ಸಂಗ್ರಹ)



ಬರೆದವರು
"ಹೊಯ್ಸಳ"



ಮನೋಹರ ಗ್ರಂಥ ಪ್ರಕಾಶನ ಸಮಿತಿ
ಧಾರವಾಡ

ಆಗಸ್ಟ ೧೯೪೩



ಬೆಲೆ: ೧ ರೂಪಾಯಿ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು:

ಶ್ರೀ. ದ. ರಾ. ಬೇಂದ್ರೆ, ಎಂ. ಎ.

ಶ್ರೀ. ರಂ. ಶ್ರೀ. ಮುಗಳಿ, ಎಂ ಎ. ಬಿ ಟಿ

ಶ್ರೀ ವಿ ಕೃ. ಗೋಕಾಕ, ಬಿ. ಎ. ( ಆಕ್ಸಫರ್ಡ )

CHECKED 1936

ಸಂಪಾದಕ

ಜಿ. ಬಿ ಜೋ



ಪ್ರಕಾಶಕರು.

ಜಿ. ಬಿ. ಜೋಶಿ

ಮನೋಹರ ಗ್ರಂಥಮಾಲಾ

ಧಾರವಾಡ

ಮುದ್ರಕರು

ಕೆ. ಜಿ. ರಾಯದುರ್ಗ

ಮೋಹನ ಮುದ್ರಣಾಲಯ

ಧಾರವಾಡ

## ನಮ್ಮ ಮಾತು

ಈ 'ಹೂವಿನ ಹಾಸಿಗೆ'ಗೆ ನಮ್ಮ ಮಾಲೆಯು ಹತ್ತನೆಯ ವರುಷ ಮುಗಿದು ಹನ್ನೊಂದನೆಯ ವರುಷ ಪ್ರಾರಂಭವಾಯಿತು. ಉಸಿರು ಕಟ್ಟಿ-ದಂತಾಗಿದ್ದ ಈ ಯುದ್ಧದ ಪರಿಸ್ಥಿತಿಯಲ್ಲಿಯೂ ಗ್ರಂಥಮಾಲೆಯು ಯಾವ ಕೊಂಕು ಕೊರತೆಯೂ ಇಲ್ಲದೆ ನಡೆದದ್ದೇ ಒಂದು ಹೆಮ್ಮೆಯ ಸಂತೋಷದ ಮಾತಾಗಿದೆ ಹೀಗೆ ಹೆಮ್ಮೆ ಪಡುವ ಸ್ಥಿತಿಗೆ ತಂದ ಶ್ರೇಯಸ್ಸು ಗ್ರಂಥ ಮಾಲೆಯ ಪ್ರಾರಂಭದಿಂದಲೂ ಅದರ ಪ್ರಾಣದಂತಿದ್ದು ಅದನ್ನು ಸಂರಕ್ಷಿ-ಸುತ್ತ ಬಂದ ಮೂವರು ಸಲಹೆಗಾರರಿಗೆ, ಗ್ರಂಥಮಾಲೆಗೆ ಮನಸ್ಸಿನಂತಿದ್ದು ಅದರ ಒಳ್ಳೆಯ ಬೆಳೆವಣಿಗೆಯನ್ನು ಮಾಡಿದ ಗ್ರಂಥಕರ್ತರಿಗೆ, ಮಾಲೆಗೆ ಅನ್ನ ಒದಗಿಸಿಕೊಟ್ಟು ಅದನ್ನು ಪೋಷಿಸಿದ ಗ್ರಾಹಕರಿಗೆ ಸಲ್ಲತಕ್ಕದ್ದು. ಇವರೆಲ್ಲ-ರಿಗೂ ನಾನು ಋಣಿಯಾಗಿದ್ದೇನೆ

'ಹೂವಿನ ಹಾಸಿಗೆ'ಯನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಅನುಮತಿಯಿತ್ತ ಶ್ರೀಮಾನ್ 'ಹೊಯಿಸಳ' ರಿಗೂ 'ಪೀಠಿಕೆ'ಯನ್ನು ಬರೆದುಕೊಟ್ಟ ಶ್ರೀಮಾನ್ ಕಣಿಯವರಿಗೂ 'ಹೂವಿನ ಹಾಸಿಗೆ'ಯ ಬೆಲೆ-ಯನ್ನು ಎತ್ತಿ ತೋರಿಸುವ ಪರಿಚಯ ಬರೆಹವನ್ನು ಬರೆದುಕೊಟ್ಟ ಶ್ರೀಮಾನ್ ಮುಗಳಿಯವರಿಗೂ ನಾನು ಕೃತಜ್ಞನಾಗಿದ್ದೇನೆ.

ಒಳ್ಳೆಯ ಹೊದಿಕೆ-ಚಿತ್ರ ಬರೆದುಕೊಟ್ಟ ಗೆಳೆಯ ರಾಘವೇಂದ್ರರಿಗೆ ನನ್ನ ಅನಂತ ವಂದನೆಗಳು.

—**ಸಂಪಾದಕ**

## ವಂದನಾರ್ಪಣೆ

ಮನೋಹರ ಗ್ರಂಥ ಮಾಲೆಯವರಿಗೆ ಮೊಟ್ಟಮೊದಲಾಗಿ ವಂದಿಸು ತ್ತೇನೆ ಅವರು ಈ ಕಷ್ಟ ಕಾಲದಲ್ಲಿ ಧೈರ್ಯಮಾಡಿ ನನ್ನ ಕತೆಗಳನ್ನು ಸಂಕಲಿಸಿ ಪ್ರಕಟಿಸಿದ್ದಾರೆ

ಶ್ರೀಮಾನ್ ಡಾಕ್ಟರ್ ಕಿಣಿಯವರು ಮುದ್ರಣವಾದಂತೆಲ್ಲ ಹಾಳೆ ಗಳನ್ನು ತರಿಸಿಕೊಂಡು ಓದಿ ಓದಿ ಅವುಗಳ ವಿಚಾರವಾಗಿ ಪೀಠಿಕೆಯನ್ನು ಬರೆದು ಕೊಟ್ಟಿದ್ದಾರೆ ಆ ಪೀಠಪದಗಳು ನನ್ನ ಪುಸ್ತಕಕ್ಕೆ ಒಂದು ಉನ್ನತ ಸ್ಥಾನವನ್ನು ಕಲ್ಪಿಸಿಕೊಟ್ಟಿವೆ. ಅದಕ್ಕಾಗಿ ಪ್ರಾಥಮಿಕ ವಿದ್ಯಾಧಿಕಾರಿ ಗಳಾದ ಅವರಿಗೆ ವಂದನೆಗಳನ್ನು ಅರ್ಪಿಸುತ್ತೇನೆ.

ಇದರಲ್ಲಿರುವ ಕಥೆಗಳಲ್ಲಿ ಕೆಲವನ್ನು ಮೊದಲು ಪ್ರಕಟಿಸಿದ ಮಕ್ಕಳ ಪುಸ್ತಕ, ಸರಸ್ವತಿ ಮೊದಲಾದ ಪತ್ರಿಕೆಗಳ ಸಂಪಾದಕರಿಗೆ ನನ್ನ ನಮಸ್ಕಾರ ಗಳು. ಎಲ್ಲಾ ಕಥೆಗಳನ್ನೂ ಓದಿ, ಆರಿಸಿ, ತಿದ್ದಿಡಲು ಸಲಹೆ ಕೊಟ್ಟ ಶ್ರೀಮಾನ್ ಜಿ ಪಿ ರಾಜರತ್ನಂ ಮತ್ತು ಸಿದ್ದವ್ವನಹಳ್ಳಿ ಕೃಷ್ಣಶರ್ಮ ಇವರಿಗೆ ನಮಿಸುತ್ತೇನೆ

ಪ್ರೊಫೆಸರ್ ಮುಗುಳಿಯವರು ಇದಕ್ಕ ಮುನ್ನುಡಿಯನ್ನು ಬರೆದು ಗೌರವಿಸಿದ್ದಾರೆ ಅದಕ್ಕಾಗಿ ಅವರಿಗೆ ನನ್ನ ವಂದನೆಗಳು.

ಈ ಪುಟ್ಟ ಹೊತ್ತಿಗೆಯನ್ನು ಅರ್ಪಿಸುವುದಕ್ಕೆ ಒಪ್ಪಿಗೆಯನ್ನು ಒಲವಿ ನಿಂದ ಕೊಟ್ಟಂಥ ಐರಿಷ್ ಕವಿಗಳಾದ ಪ್ರೊಫೆಸರ್ ಕಸಿನ್ಸರವರಿಗೂ ಅವರ ಸತೀಮಣಿಯರಾದ ಶ್ರೀಮತಿ ಮಾರ್ಗರೆಟ್ ಕಸಿನ್ಸ ಸಂಗೀತಕಲಾಕೋವಿದೆ ಯವರಿಗೂ ಅನಂತಾನಂತ ವಂದನೆಗಳು ಅವರೀರ್ವರು ಮಾಡಿದ ಸಹಾಯಕ್ಕೆ ನನ್ನ ಬದುಕೇ ಸಾಕ್ಷಿ. ಕನ್ನಡದ ಕಡೆಗೆ ನನ್ನ ಕಲ್ಪನಾಲಹರಿಯನ್ನು ಹರಿಸಿದವರೂ ಅವರೇ ಆಗಿದ್ದಾರೆ

ಈ ಕತೆಗಳೆಲ್ಲ ಬಗೆಬಗೆಯಾಗಿವೆ. ಭಾಷೆಯ ಶೈಲಿಯು ಆವರಣಕ್ಕೆ ತಕ್ಕಂತೆ ಹರಿದಿದೆ. ವಿಷಯಗಳನ್ನು ಎಲ್ಲೆಲ್ಲಿಂದಲೊ ಆರಿಸಿದ್ದೇನೆ. ಕೆಲವನ್ನು ನನ್ನ ತಾಯಿಯವರು ಹೇಳುತ್ತಿದ್ದ ಗಾದೆಗಳಿಂದಲೇ ವಿಸ್ತರಿಸಿದ್ದೇನೆ. ಕೆಲವ ನ್ನಂತೂ ಮಕ್ಕಳ ಸಂಗಡ ಕಥೆ ಕಟ್ಟುವ ಆಟ ಆಡುತ್ತ ಇದಾಗ್ಗೆ ರೂಪಿಸಿ ಕೊಂಡಿದ್ದೇನೆ. ಇದೂ ಒಂದು ಹೊಸ ಮಾದರಿಯ ಪಾಕವೆಂದು ಓದುಗರ ಮಡಿಲಲ್ಲಿ ಹಾಕಿದ್ದೇನೆ.

—**ಹೊಯಿಸಳ**

ಹೊಯಸಳನ ವಿಶ್ವವಿದ್ಯಾನಿಲಯಗಳ

ಅನುಭವಕ್ಕೆ ಕಾರಣರಾದ

ಶ್ರೀ. ಕಜಿನ್ಸ ದಂಪತಿಗಳಿಗೆ

ಇದು

ಭಕ್ತಿಪೂರ್ವಕ ಅರ್ಪಿಸಿದ

ಕಾಣಿಕೆ

*

## ಪೀಠಿಕೆ

ಧಾರವಾಡದ "ಮನೋಹರ ಗ್ರಂಥ ಮಾಲೆ"ಯಲ್ಲಿ ಪ್ರಕಟವಾದ 'ಹೂವಿನ ಹಾಸಿಗೆ' ಎಂಬ ಶ್ರೀ ಹೊಯಿಸಳರ ಸಣ್ಣ ಕತೆಗಳ ಸಂಗ್ರಹವನ್ನು ನಾನು ಓದಿ ನೋಡಿದ್ದೇನೆ ಹೊಯಿಸಳರ ಶೈಲಿ ಸುಲಭ, ಆದುದರಿಂದ ಈ ಕಥೆಗಳು ಸೆಕಂಡರಿ ಸ್ಕೂಲುಗಳ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಎಲ್ಲ ಕನ್ನಡ ಜನಸಾಮಾನ್ಯಕ್ಕೂ ಮನರಂಜನವಾಗಬಹುದು

ಮೈಸೂರು ಸರಕಾರದವರು ಏರ್ಪಡಿಸಿರುವ ವಯಸ್ಕರ ವಿದ್ಯಾ ಪ್ರಚಾರ ಸಭೆಯವರ ಆಶಯಗಳಿಗೂ ಸಹ ಇದು ಸರಿದೂಗಿ ಬರುತ್ತದೆ ವಿದ್ಯೆಯ ಹೊಸ ದೃಷ್ಟಿಯನ್ನು ಪಡೆದ ಆ ವಯಸ್ಕರು ಪುನಃ ಅಜ್ಞಾನದ ಅಂಧತೆಯನ್ನು ಪಡೆಯದಂತೆ ಇಂಥ ಪುಸ್ತಕಗಳು ಕಾದುಕೊಂಡಿರುತ್ತವೆ.

ನಮ್ಮಲ್ಲಿಯ ತಾಯಿ ತಂಗಿಯರೂ ಸಹ ದಿನವೆಲ್ಲ ಕೆಲಸ ಮಾಡಿ ದಣಿದು ಕುಳಿತಾಗ ಈ ಕತೆಗಳನ್ನು ಓದಬಹುದು. ಅವರ ಮನಸ್ಸಿಗೆ ಹರ್ಷವಾಗುತ್ತದೆ.

ಇಲ್ಲಿನ ಕಥಾವಸ್ತುಗಳೆಲ್ಲ ಸಾಧಾರಣ ಜೀವನದವು ಕೆಲವು ಇತರ ದೇಶದ ಪುಸ್ತಕಗಳಿಂದ ಆರಿಸಿದವು; ಮತ್ತು ಇನ್ನು ಕೆಲವು ಹಿಂದುಸ್ಥಾನದ ಇತರ ಭಾಷೆಗಳಿಂದ ಆಯ್ದವು. ಓದುಗರು ನವೀನ ವಿಷಯಗಳನ್ನೂ ಮತ್ತು ರೀತಿಗಳನ್ನೂ ಕಂಡುಕೊಳ್ಳುವುದರಿಂದ ಬೇಸರ ಹೊಂದರು. ಪುಸ್ತಕ ಮುಗಿವ ವರೆಗೆ ಅತ್ತಿತ್ತ ಕದಲದಂತೆ ಒಲಿದು ಕುಳಿತು ಬಿಟ್ಟಾರು. ಓದುಗರಿಗೆ ಇತರ ನಾಡು ನಡೆಗಳ ಪರಿಚಯವು ಹೆಚ್ಚುವುದು. ಅವರ ಭಾಷೆಯು ಅಭಿವೃದ್ಧಿಯಾಗುವುದು ಸಾಹಿತ್ಯದಲ್ಲಿ ಅಂಥವರ ಅಭಿರುಚಿಯು ಬೆಳೆಯುತ್ತದೆ.

—ಕೆ. ಎನ್. ಕಿಣಿ,
ಡೆಪ್ಯೂಟಿ ಡೈರೆಕ್ಟರ
(ಪ್ರಾಥಮಿಕ ವಿದ್ಯಾಖಾತೆ) ಮೈಸೂರು

ಬೆಂಗಳೂರು,
೨೨-೫-೧೯೪೩

# ಮುನ್ನುಡಿ

ಕನ್ನಡದಲ್ಲಿ ಮಕ್ಕಳ ಸಾಹಿತ್ಯದ ಮೊಳಕೆಯೊಡೆದು ಕೆಲಕಾಲವಾಯಿತು, ಅಂದಿನಿಂದ ಅದು ಬೆಳೆಯುತ್ತಲೇ ಇದೆ. ಮುಪ್ಪಿನಲ್ಲಿಯೂ ಹಸುಮಕ್ಕಳಂತೆ ಹೊಸ ಹುಮ್ಮಸು ತೋರಿದ ದಿವಂಗತ ಪಂಜೆಯವರು ಅದಕ್ಕೆ ಮೊದಲಿಗರಾದರು, ತರುವಾಯ ಶ್ರೀಗಳಾದ ಎಂ ಎನ್ ಕಾಮತರು, ಕಾರಂತರು, ದೇವುಡು, ರಾಜರತ್ನ ಈ ಮೊದಲಾದ ಮಹನೀಯರು ಈ ಸಾಹಿತ್ಯಕ್ಕೆ ನೀರೆರೆದು ಪೋಷಿಸುತ್ತಿದ್ದಾರೆ ಇವರಲ್ಲಿ ಶ್ರೀ. ಹೊಯಿಸಳರು ಮಾನ್ಯವಾದ ಸ್ಥಾನಕ್ಕೆ ಅರ್ಹರಾಗಿದ್ದಾರೆ.

ಮಕ್ಕಳ ಸಾಹಿತ್ಯ ಬರೆಯುವುದು ಒಂದು ದೃಷ್ಟಿಯಿಂದ ಸುಲಭ, ಒಂದು ದೃಷ್ಟಿಯಿಂದ ಬಹಳ ಕಠಿಣ. ಮಕ್ಕಳ ಮನಸ್ಸಿನ ಒಲವು ಚೆಲುವುಗಳನ್ನೂ ಒರೆ ಕೋರೆಗಳನ್ನೂ ಅರಿತು ಅದರಲ್ಲಿ ನೇರವಾಗಿ ಪ್ರವೇಶಹೊಂದಿದರೆ ಅವರಿಗೆ ಬೇಕಾದ ಸಾಹಿತ್ಯವನ್ನು ಸುಲಭವಾಗಿ ನಿರ್ಮಿಸಬಹುದು. ಆದರೆ ಆ ಬಾಲಕಲೋಕದಲ್ಲಿ ಪ್ರವೇಶಿಸಲು ಸಾಧ್ಯವಾಗದೆ ಹೋದರೆ, ಹಿರಿತನದ ಗೌರವವು ಆ ಲೋಕದ ದಾರಿಗೆ ಅಡ್ಡ ಮುಳ್ಳು ಹಚ್ಚಿದರೆ.

ಬೇಕಾದಷ್ಟು ಲೇಖನಶಕ್ತಿಯಿದ್ದವರಿಂದಲೂ ಮಕ್ಕಳ ಸಾಹಿತ್ಯವು ನಿರ್ಮಿತ ವಾಗದು. ಶ್ರೀ. ಹೊಯಿಸಳರಿಗ ಮಕ್ಕಳ ಲೋಕದಲ್ಲಿ ಸಹಜಪ್ರವೇಶವಿದೆ. ಅವರ ಜೀವನದೊಡನೆ ಅವರು ಒಂದಾಗಬಲ್ಲರು. ಮಕ್ಕಳೊಡನೆ ಆಟವಾಡಿ ಅವರ ಆಟನೋಟಗಳನ್ನು ಬಹು ಚೆನ್ನಾಗಿ ನಿರೀಕ್ಷಿಸಿದ್ದಾರೆ. ಹೀಗಾಗಿ ಅವರ ಬರೆವಣಿಗೆಯು ಮಕ್ಕಳ ಚಮತ್ಕೃತಿ ಪ್ರಿಯವಾದ ಕಲ್ಪನಾವಿಲಾಸ ವನ್ನು ತನ್ನಲ್ಲಿ ಅಳವಡಿಸಿಕೊಂಡಿದೆ; ಮಕ್ಕಳ ಚಂಚಲವೃತ್ತಿಯನ್ನು ತೊಡೆದು ಕಲೆಯ ಪರಿಪೂರ್ಣ ಸಂಯೋಜನೆಯನ್ನು ಸಾಧಿಸಿದೆ. ಇಂಥ ಬರೆವಣಿಗೆ ಯಿಂದ ಮಕ್ಕಳ ಸಹಜಪ್ರವೃತ್ತಿಗಳಿಗೆ ಸಮಾಧಾನವು ದೊರೆವುದಲ್ಲದೆ ಅವರ ಸಂಸ್ಕೃತಿ ಹೆಚ್ಚುತ್ತದೆ, ಮನಸ್ಸು ಮಾಗುತ್ತದೆ. ಹಲವಾರು ಕವನಗಳಲ್ಲಿ ಇಂಥ ಸಾಹಿತ್ಯವನ್ನು ರಚಿಸಿ ಇದೀಗ ಈ ' ಹೂವಿನ ಹಾಸಿಗೆ ' ಯಲ್ಲಿ ಹೊಯಿಸಳರು ಮಕ್ಕಳಿಗೆ ಮೆಚ್ಚಿಗೆಯಾಗಬಹುದಾದ ಹಲವು ಕತೆಗಳನ್ನು ಹೇಳಿದ್ದಾರೆ. ಇಲ್ಲ ಅದ್ಭುತರಮ್ಯ ವಿಷಯಗಳುಳ್ಳ ಪ್ರಾಚೀನ ಮತ್ತು ಅರ್ವಾಚೀನ ಕಥೆಗಳಿವೆ. ಎಲ್ಲ ಕಡೆಗೆ ಕುತೂಹಲವನ್ನು ಕೆರಳಿಸುವ ಜಾಣ್ಮೆ ಇದೆ, ಮಕ್ಕಳನ್ನು ಇದಿರಲ್ಲಿ ಕೂರಿಸಿಕೊಂಡು ಕತೆ ಹೇಳುವ ಸಜೀವವಾದ ಕತೆಗಾರಿಕೆಯಿದೆ ನಂದಿಮಾಹಾತ್ಮ್ಯದ ಗೋವಿಂದಕವಿ ಹೇಳಿದಂತೆ ' ತನು ವಿಲ್ಲದಲ್ಲಿ ಪ್ರಾಣಪ್ರತಿಷ್ಠೆ'ಯನ್ನು ಮಾಡುವ ಘನತೆ ಹಲವು ಕತೆಗಳಲ್ಲಿದೆ. ಎಂಥ ನಿರ್ಜೀವ ವಸ್ತುಗಳಲ್ಲಿಯೂ ಸಜೀವತೆ ಇರುವುದೆಂಬ ನೈಜಭಾವ ನೆಯು ಮಕ್ಕಳಲ್ಲಿ ಬೇರೂರಿರುತ್ತದೆ. ಅದಕ್ಕೆ ' ಖಿಸೀ ಮಾವು ' ' ಪರಾಕ್ಷಿ ' ಯಂಥ ಕತೆಗಳು ಸಾಕ್ಷಿಯಾಗಿವೆ. ಅಲ್ಲಲ್ಲಿ ಯಾವುದೋ ಒಂದು ಲೋಕ ನೀತಿಯು ಸೂಚ್ಯವಾಗಿ ಕತೆಯ ಒಡಲಲ್ಲಿ ಸೇರಿಕೊಂಡಿರುತ್ತದೆ. ಇಂಥ ಕತೆಗಳು ಮಕ್ಕಳ ಪಠ್ಯಪುಸ್ತಕಗಳಲ್ಲಿ ಅವಶ್ಯವಾಗಿ ಸ್ಥಾನ ಹೊಂದಬೇಕು. ಹಿರಿಯರೂ ಇವನ್ನು ಓದಿದರೆ ಮಕ್ಕಳನ್ನು ಬೆಳಸುವ ರೀತಿನೀತಿಗಳನ್ನು ಅರಿಯುವರು. ಈ ' ಹೂವಿನ ಹಾಸಿಗೆ 'ಯನ್ನು ಕನ್ನಡ ನಾಡಿನ ಮಕ್ಕಳಿ ಗಾಗಿ ಹಾಸಿಕೊಟ್ಟಿರುವ ಹೊಯಿಸಳರನ್ನು ಮನಸಾರೆ ಅಭಿನಂದಿಸುತ್ತೇನೆ, ಇಂಥ ಇನ್ನೂ ಹಲವು ಕೃತಿಗಳು ಅವರಿಂದ ಹೊರಬೀಳಲಿ ಎಂದು ಹಾರೈಸುತ್ತೇನೆ.

—ರಂ. ಶ್ರೀ. ಮುಗಳಿ

## ಪರಿವಿಡಿ

ಮುಂದಿನ ಕುಸುಮ

# ಕನಸಿನ ಕೆಳದಿ

(ಸಣ್ಣ ಕತೆಗಳ ಸಂಗ್ರಹ)

ಬರೆದವರು

ರಂ. ಶ್ರೀ. ಮುಗಳಿ

ಎಂ. ಎ. ಬಿ. ಟಿ

## ಹೂವಿನ ಹಾಸಿಗೆ

ಬಹಳ ಹಿಂದಿನ ಕಾಲ ಆಗ ಅರಬ್ಬಿ ದೇಶದಲ್ಲಿ ಒಬ್ಬ ರಾಜ ಇದ್ದ. ಆ ರಾಜನ ಹೆಸರು ಅಬು ಬಿನ್ ಆಧಂ. ಎರಡರಡು ಸಾರಿ ಹೇಳಿಕೊಳ್ಳಿ ಈ ಹೆಸರು. ಅಬು ಬಿನ್ ಆಧಂ! ಅಬು ಬಿನ್ ಆಧಂ! ಎಲ್ಲಿ? ಅರೇಬಿಯಾ ದೇಶದಲ್ಲಿ.

ಆಧಂ ಬಹಳ ಜಬರ್ದಸ್ತ ರಾಜ ಆತನ ಹೆಸರನ್ನು ಯಾರೂ ಗಟ್ಟಿಯಾಗಿ ಹೇಳಕೂಡದು ಆತನ ಹೆದರಿಕೆ ಎಷ್ಟು ಇತ್ತು ಬಲ್ಲಿರಾ? ಕಾಗದದ ಮೇಲೆ ಆ ಘನವಂತನ ನಾಮವನ್ನು ಕಂಡರೆ ಅಲ್ಲೇ ಸಲಾಂ ಮಾಡಿ ಅದನ್ನು ಕಣ್ಣಿಗೆ ಒತ್ತಿಕೊಳ್ಳಬೇಕು ಆತನ ಎದುರಲ್ಲಿ ಯಾರೂ ನಿಲ್ಲಕೂಡದು. ಕಣ್ಣೆತ್ತಿ ನೋಡಬಾರದು. ಸಮೀಪದಲ್ಲಿ ಮಾತಾಡಬಾರದು. ಆತ ರಸ್ತೆಯಲ್ಲಿ ಬರುತ್ತಿದ್ದರೆ ಆತ ದಾಟಿ ಹೋಗುವ ವರೆಗೂ ಅಕ್ಕಪಕ್ಕದವರೆಲ್ಲ ನೆಲದಲ್ಲಿ ಮುಖವಿಟ್ಟು ಮಲಗಿರಬೇಕು ಅಷ್ಟು ಭಯ; ಅಷ್ಟು ದರ್ಬಾರು; ಅಷ್ಟೊಂದು ಹಮ್ಮು; ಅಷ್ಟೆಲ್ಲ ಐಶ್ವರ್ಯದ ಮದ

ಅಬು ಬಿನ್ ಆಧಂ ಚಕ್ರವರ್ತಿಗೆ ಇಪ್ಪತ್ತೆರಡು ವರ್ಷ ವಯಸ್ಸು. ಗುಲಾಬಿ ಹೂ, ತಾವರೆ ಹೂಗಳನ್ನು ನೋಡಿದರೆ ಎಷ್ಟು ಸಂತೋಷವಾಗುತ್ತದೆಯೋ ಅದಕ್ಕಿಂತ ಹೆಚ್ಚು ಸಂತೋಷವಾಗುತ್ತಿತ್ತು—ಆಧಂ ಬಾದಶಹನನ್ನು ಕಂಡರೆ ಅಂಥ ರಾಜೇಶ್ವರನಿಗೆ ಸರಿಯಾದ ಹೆಣ್ಣೇ ಸಿಕ್ಕಿರಲಿಲ್ಲ. ಆದ್ದರಿಂದ ಆತ ಮದುವೆಯಾಗಿರಲಿಲ್ಲ

ಅರಮನೆಯಲ್ಲಿ ಇದ್ದವರು ಇಬ್ಬರೇ. ಆಧಂ ಇಪ್ಪತ್ತೆರಡು ವಯಸ್ಸಿನ ಹರೆಯದವನು; ಮತ್ತು ಆಧಂನನ್ನು ತೊಟ್ಟಿಲಿಂದಲೂ ಎತ್ತಿ ಆಡಿಸುತ್ತಿದ್ದ ಎಂಭತ್ತು ವರ್ಷದ ಮುದುಕಿ ಆಧಂ ಮತ್ತು ಈ ಮುದುಕಿ ವಿನಾ ಉಳಿದವರೆಲ್ಲ ಆಳು ಕಾಳು, ಸಿಸ್ತಿನವರು, ಸೈನ್ಯದವರು

ಊಟ, ಕುದುರೆಸವಾರಿ, ದರ್ಬಾರು ಇಷ್ಟೆಲ್ಲ ಆಗಿ ಮುಗಿದು ಬಂದರೆ ದಣಿವಾಗಿರುವುದಿಲ್ಲವೇ? ಹಾಗೆ ದಣಿದ ಆಧಂ ಬಂದರೆ ಮಲಗುವುದಕ್ಕೆ ಹಾಸಿಗೆ ಬೇಕು ಚಕ್ರವರ್ತಿಗೆ ಹಾಸಿಗೆ ಹಾಸುವ ಕೆಲಸ ಎಂಭತ್ತು ವರ್ಷದ ಈ ಮುದುಕಿಯದು. ಇದೇ ನಾಜೂಕಿನ ನಯಗೆಲಸವನ್ನು ಈಕೆ ಇಪ್ಪತ್ತು ವರ್ಷದಿಂದ ಮಾಡುತ್ತಿರುವಳು ಅದೆಂಥ ಹಾಸಿಗೆ ಹಾಗಾದರೆ?

ಹಾಸಿಗೆಯೆಂದರೆ ಸಾಧಾರಣ ಹಾಸಿಗೆಯಲ್ಲ ಅದು ಅಂತಿಂಥ ಹಾಸಿಗೆಯಾದರೆ ಯಾರಾದರೂ ಹಾಸಿಯಾರು ಇನ್ನಾರಾದರೂ ಮಲಗಿಯಾರು. ಚಕ್ರವರ್ತಿ ಆಧಂನ ಹಾಸಿಗೆ ಸಲಸಲಕ್ಕೂ ಬಂಗಾರ ಸೂರೆ ಮಾಡಿ ಹಾಸುವ ಗುಲಾಬಿಯ ಹಾಸಿಗೆ. ಆಧಂ ಚಕ್ರವರ್ತಿ ಮಲಗುವ ಮನೆಯ ವಿತರಣೆ ಹೀಗಿತ್ತು—ಬೆಳ್ಳಿಯ ಕೋಣೆ ಚಿತ್ತಾರದ ಗೋಡೆ. ದಂತದ ನೆಲ.

ಒಂಗಾರ ಮಂಚ. ಅದರ ತುಂಬ ವಜ್ರವೈಡೂರ್ಯಗಳನ್ನು ಜೋಡಿಸಿ ಮಾಡಿದ ನಕಾಸೆಯ ಕೆಲಸ. ಇನ್ನೂ ಹೇಳಲೇನು ? ಮೆತ್ತನೆ ಸುಪ್ಪತ್ತಿಗೆ ಅದಕ್ಕೆಲ್ಲ ಒಪ್ಪುವಂಥ ದಿಂಬು, ಧಾವಳಿ, ಪರದೆ. ಇಷ್ಟೆಲ್ಲ ಸಜ್ಜಾದ ಮೇಲೆ ಹೂವು ಹರಡಿರಬೇಕು. ದಳದಳವಾಗಿ ಬಿಡಿಸಿದ ಘಮಘಮ ಗುಲಾಬಿ ಹೂಗಳು. ಎಷ್ಟು ಬೇಕಾಗಿತ್ತು ಗುಲಾಬಿ ಹೂವು ? ಹತ್ತು ಮಣ ಗುಲಾಬಿ ಹೂವು ಇಷ್ಟು ಗುಲಾಬಿ ಹೂವುಗಳನ್ನು ಬಿಡಿಸಿ ಹಾಸಿದ ಮೇಲೆ ಸುಗಂಧದೆಣ್ಣೆಗಳನ್ನು ಚಿಮುಕಿಸಬೇಕು ಇದೇ ಅಧಂ ಚಕ್ರವರ್ತಿಯ ಹಾಸಿಗೆ ಅದನ್ನು ಹಾಸುತ್ತಿದ್ದವಳು ಆ ಮುದುಕಿ—ಎಂಭತ್ತು ವರ್ಷದವಳು. ಅವಳಿಗೆ ಇಪ್ಪತ್ತು ವರ್ಷದ ಅನುಭವ !

ಇಂಥಾ ಹಾಸಿಗೆಯನ್ನು ಕಂಡವರು ಯಾರಾದರೂ ಇದ್ದಾರೇನು ? ನೀವೆಂದಾದರೂ ಅಂಥದರಲ್ಲಿ ಮಲಗಿದ್ದೀರಾ ? ಎಂದೂ ಇಲ್ಲವೆ ? ಹೋಗಲಿ, ಊಹಿಸಿ, ನೋಡೋಣ ಹೂವಿನ ಹಾಸಿಗೆಯಾದ ಇದರಲ್ಲಿ ಮಲಗುವವರಿಗೆ ಇನ್ನೆಂಥ ನಿದ್ರೆ ಒರಬೇಡ ! ಮೈಸೋಕುವುದೇ ತಡ, ನಿದ್ರೆ ಸುತ್ತಿ ಸುತ್ತಿ ಒಂದುಬಿಡುತ್ತಿದೆ

ಆದರೆ ನೋಡಿ ಅಧಂ ಚಕ್ರವರ್ತಿಗೆ ಈ ಹಾಸಿಗೆಯಲ್ಲಿ ಸಹ ನಿದ್ರೆ ಬರುತ್ತಿರಲಿಲ್ಲ ಆತನಿಗೆ ರಾಜ್ಯದ ಯೋಚನೆ ಅಷ್ಟಿತ್ತು ಜನರಿಗೆ ಒಳ್ಳೆಯದಾಗಬೇಕು; ಕಾಲುವೆ, ಬಾವಿ, ಕೊಳ, ಕೆರೆ, ಆಸ್ಪತ್ರೆ, ಅನ್ನಸತ್ರ, ಹಾದಿ, ಪೇಟೆ, ಅರವಟ್ಟಿ—ಇವೇ ಮುಂತಾದ್ದೆಲ್ಲ ಏರ್ಪಡಿಸುತ್ತ ಕಾಲಕಳೆಯುವನು. ನಿತ್ಯ ನಿತ್ಯ ನೂರು ನೂರು ಮೈಲಿಯಾದರೂ ಪೈಗೂ ಕುದುರೆಗಳ ಮೇಲೆ ತಿರುಗಿ ಒರುವನು. ಭಾರಿ ರಾಜ್ಯಭಾರ ಅಧಂ ಚಕ್ರವರ್ತಿಯದು ಆದ್ದರಿಂದ ಇಂಥ ಗುಲಾಬಿ ಹಾಸಿಗೆಯಲ್ಲಿ ಕೂಡ ಆತನಿಗೆ ನಿದ್ರೆ ಒರುತ್ತಿರಲಿಲ್ಲ ಅಷ್ಟೊಂದು ಕೆಲಸ, ಅಷ್ಟೊಂದು ರಾಜ್ಯದ ಯೋಚನೆ. ಪ್ರಜೆಗಳಿಗೆಲ್ಲ ಅನುಕೂಲ ಮಾಡಿಕೊಡಬೇಕೆಂದರೆ ಇನ್ನಷ್ಟು ಉತ್ಸಾಹ, ಆಶೆ ಆದ್ದರಿಂದ ಅಧಂನಿಗೆ ನಿದ್ರೆ ಒರದು. ಇರಲಿ ಮುಂದೇನಾಯಿತು ?

ಒಂದು ರಾತ್ರಿ ಎಂಭತ್ತು ವರ್ಷದ ಬೀಬಿ, ಪಾಪ ಮುದುಕಿ, ದಣಿದು ಬಂದಳು ಬಹಳ ಕೆಲಸ ಅವಳಿಗೆ ಆದರೂ ಕೂಡ ಕಲೀಫಾ ಅಧಂರವರ ಹಾಸಿಗೆ ಹಾಸದೆ ಬಿಡುವವಳಲ್ಲ ಕಟ್ಟಕಡೆಯ ಕೆಲಸವಾಗಿತ್ತು ಯಾವುದು?

ಹಾಸಿಗೆ ಸಿದ್ಧಮಾಡುವ ಕೆಲಸ ಮುಸ್ಕಿನ ಮುದಿಕಿಯಲ್ಲದೆ ಇನ್ನಾರು ಹಾಸಿದರೂ ಅಧಂನಿಗ ಮನಸ್ಸೊಪ್ಪದು

ಹಾಸಿಗ ಹಾಸಿದಳು. ಹೂ ಹರಡಿದಳು. ಒಂದಲ್ಲ ಎರಡಲ್ಲ ಹತ್ತು ಮಣ ಗುಲಾಬಿಯ ದಳ ಅದೆಷ್ಟು ದೊಡ್ಡ ರಾಸಿ ಆ ಹೂವಿನದು! ಅಷ್ಟೂ ಹರಡಿ ಪನ್ನೀರು ಚಿಮುಕಿಸಿದ ಮೇಲೆ ಕಸ್ತೂರಿ ಜವಾಜಿ ಮೊದಲಾದ ಸುವಾಸನೆ ಪದಾರ್ಥಗಳನ್ನೆಲ್ಲ ಕದಡಿ ಎರಚಿದಳು ಅತ್ತರೆಣ್ಣೆಯ ದೀಪ ವನ್ನು ಮೀಟಿದಳು. ಮಲ್ಲಿಗೆ ಎಣ್ಣೆಯ ದೀಪಗಳನ್ನು ಸಣ್ಣಗೆ ಮಾಡಿದಳು. ಆಮೇಲೆ?

ಆಮೇಲೆ ಬಂದುದು ಪ್ರಮಾದ ಆ ಹೂವಿನ ಹಾಸಿಗೆಯಲ್ಲಿ ಏಕೋ ಕೈ ಊರಿದಳು ಊರಿದ ಕೈ ಗುಲಾಬಿಯ ದಳಗಳಲ್ಲಿ ಹೂತುಹೋಯಿತು ಹಾಗೆಯೇ ಒರಗಿದಳು. ಮೈಯೆಲ್ಲ ಗುಲಾಬಿಯ ದಳಗಳಲ್ಲಿ ಮುಚ್ಚಿ ಹೋಯಿತು. ದಣಿದಿದ್ದಾಳಷ್ಟೆ! ಪಾಪ ಮುದಿಕಿಯಲ್ಲವೆ, ನಿದ್ದೆ ಒಂದೇ ಬಿಟ್ಟಿತು ಎಲ್ಲಿದ್ದಾಳೆ ಎಂಭತ್ತು ವರ್ಷದ ಬೀಬಿ? ಅಧಂ ಬಾದಶಹನ ಹಾಸಿಗ ಯಲ್ಲಿ!

ರಾತ್ರಿ ಬಹಳ ಹೊತ್ತಾಗಿ ಹೋಗಿದೆ ಅಧಂ ಚಕ್ರವರ್ತಿ ರಾಜಧಾನಿ ಯಲ್ಲಿ ಎಲ್ಲ ಕಡೆಯೂ ತಿರುಗಿ ಬಂದಿದ್ದಾನೆ ನಿತ್ಯ ಕಾದಿದ್ದು, ಕರೆದು, ಮಾತನಾಡಿಸುತ್ತ ಇದ್ದ ಬೀಬಿಯಲ್ಲಿ? ಎಲ್ಲಿಯೂ ಕಾಣಲಿಲ್ಲ. ನೇರವಾಗಿ ಬಂದ ಮಲಗುವ ಮನೆಗೆ ಬಾಗಿಲು ತೆರೆದ ಅತ್ತರೆಣ್ಣೆ ದೀಪ ಮೀಟಿದ; ಮಲ್ಲಿಗ ಎಣ್ಣೆಯ ದೀಪ ಮೀಟಿದ, ಗಂಧದೆಣ್ಣೆಯ ದೀಪ ಮೀಟಿದ; ಕಾಲಿಟ್ಟ ಕೂಡಲೆ ದಂತದ ನೆಲವೂ ಬೆಳ್ಳಿಯ ಮಾಳಿಗೆಯೂ ಸೇರಿ ಹತ್ತು ಜನ ನಡೆದಷ್ಟು ಶಬ್ದವಾಯಿತು ದೀಪಗಳ ಬೆಳಕಿನಲ್ಲಿ ಮಂಚದ ಚಿತ್ರಗಳೆಲ್ಲ ಥಳ ಥಳ ಹೊಳೆದವು. ಆದರೆ ಹೂವೆಲ್ಲವೂ ಸಮವಾಗಿ ಹರಡಿರಲಿಲ್ಲ ಹಳ್ಳಕೊಳ್ಳ ವಾಗಿತ್ತು ಇದೇನು ಹೀಗಾಗಿದೆಯೆಂದು ಬಗ್ಗಿ ನೋಡಿದ ಯಾರು ಮಲ ಗಿದ್ದಾರೆ! ಮಹಾ ಚಕ್ರವರ್ತಿ ಮಲಗುವ ಮಂಚದಲ್ಲಿ? ಬೀಬಿ! ಯಾರು ಮಲಗಿದ್ದಾರೆ ಹತ್ತುಮಣ ಗುಲಾಬಿ ದಳಗಳ ನಡುವೆ? ಮುದುಕಿ ಬೀಬಿ! ಅಧಂನ ಹಾಸಿಗೆಯಲ್ಲಿ ಬೀಬಿಯೇ!

ಅಧಂ ಚಕ್ರವರ್ತಿಗ ನಗು ಬಂತು ನಕ್ಕುಬಿಟ್ಟ. ಸಿಟ್ಟು ಬಂತು,

ಕೂಗಿ ರೇಗಿಬಿಟ್ಟ. ಇಷ್ಟು ಹೊತ್ತಿಗೆ ಆಳುಕಾಳುಗಳೆಲ್ಲ ಬಂದು ತುಂಬಿ ಕೊಂಡರು. ಎಲ್ಲರಿಗೂ ಆಶ್ಚರ್ಯ. ಎಲ್ಲರಿಗೂ ಭಯ.

ಚಕ್ರವರ್ತಿ ಅಧಂ ಅಧಿಕಾರಿಗಳನ್ನು ಕರೆದ. 'ಬೀಜಿಗೆ ಹುಚ್ಚು ಹಿಡಿದಿದೆ. ಡುರ್ರಾ ತರಿಸಿರಿ. ಬಿಗಿಯಿರಿ ನಾಲ್ಕಾರು ಡುರ್ರಾ! ಬುದ್ಧಿ ಬರಲಿ!' ಎಂದ.

ಡುರ್ರಾ ಎಂಬುದು ಏಳು ಹುರಿ ಚರ್ಮದ ಚಾವಟಿ. ಆಳುಗಳು ಬಂದು ನಿಂತರು. ಎರಡೇಟಿಗೆ ಗುಲಾಬಿಯೆಲ್ಲ ಚೆಲ್ಲಾಪಿಲ್ಲಿಯಾಗಿಬಿಟ್ಟಿತು. ಬೀಬಿಯ ಕೈಕಾಲೆಲ್ಲ ನಡುಗಹತ್ತಿತು. ಆಳುಗಳು ಆ ಮುದುಕಿಯನ್ನು ಈಚೆಗೆ ಎಳೆದು ಹಾಕಿದರು.

ಮುದುಕಿ ಅಧಂನ ಕಾಲಿಗೆ ಬಿದ್ದಳು. ತಪ್ಪಾಯಿತೆಂದು ಬೇಡಿಕೊಂಡಳು. ಅಧಂ ಚಕ್ರವರ್ತಿಗೆ ಮನಸ್ಸು ಕರಗಲಿಲ್ಲ. ಹಣ್ಣು ಹಣ್ಣು ಮುದುಕಿ ಹರೆಯದವನನ್ನು ಬೇಡಿಕೊಂಡಳು. ತಾನು ಎತ್ತಿ ಆಡಿಸಿದ ಅಧಂನನ್ನು ಅಂಗಲಾಚಿ ಬೇಡಿಕೊಂಡಳು. 'ತಪ್ಪಾಯಿತು, ಕ್ಷಮಿಸು, ಕೈ ಮೀರಿ ಹೋಯಿತು. ಸೋತುಹೋಗಿದ್ದೆ ನಿನ್ನ ಅರಮನೆಯ ಕೆಲಸದಲ್ಲಿ. ಅದಕ್ಕೆ ಈ ಅಚಾತುರ್ಯವಾಯಿತು. ಇಪ್ಪತ್ತು ವರ್ಷದಿಂದ ಈ ಹಾಸಿಗೆ ಹಾಸಿದ್ದೇನೆ. ನಾನೆಂದಾದರೂ ಕೈ ಊರಿದ್ದೇನೇ? ಈ ದಿನ ಕ್ಷಮಿಸುವದಿಲ್ಲವ ಅಧಂ?' ಎಂದು ವಿಧವಿಧವಾಗಿ ಹೇಳಿಕೊಂಡಳು.

ಅಧಂ ಚಕ್ರವರ್ತಿಯ ಮನಸ್ಸು ಕಲ್ಲಾಗಿತ್ತು. ಮುದುಕಿಯನ್ನು ಒದ್ದು ತಳ್ಳಿ, ಹೊಡೆದು ಹೊರಟುಹೋದ. ಕಲೀಫರ ಹಾಸಿಗೆಯಲ್ಲಿ ಈ ಮೂಳಿ, ಈ ದಾಸಿ, ಈ ಮುದುಕಿ ಮಲಗುವ ಧೈರ್ಯ ಮಾಡಿದಳೆ ಈ ನಾಯಿ—ಹೀಗೆಲ್ಲ ಬೈದು ಆಳುಗಳು ಮೂವತ್ತೆರಡು ಡುರ್ರಾ ಹೊಡೆದು, ಕೈಬಿಟ್ಟರು.

* * * *

ಇತ್ತ ಅಧಂ ಚಕ್ರವರ್ತಿಗೆ ನಿದ್ದೆ ಬರಲಿಲ್ಲ. ಅರಮನೆಯಲ್ಲೆಲ್ಲಾ ತಿರುಗಿದ. ಬಹಳ ಹೊತ್ತು ತಿರುಗಿದ ಮೇಲೆ ಹೆಂಗಸರು ವಾಸ ಮಾಡುವ ಕೋಣೆಯೊಂದರ ಬಳಿ ಬಂದು ನಿಂತ. ಅಲ್ಲಿ ಒಳಗಡೆ ಯಾರೋ ನರಳುತ್ತ ಮಲಗಿದ್ದರು. ಮಲಗಿದವರು ಮತ್ತೆ ಎದ್ದು ಏನೋ ಹೇಳತೊಡಗಿದರು. ಅಧಂ ನಿಂತು ಕೇಳಿದ. ಅದು ಯಾರಿರಬಹುದು?

‘ದೇವರೇ! ಇಪ್ಪತ್ತು ವರ್ಷಗಳಿಂದ ಹಾಸಿಡುತ್ತಿದ್ದ ಗುಲಾಬಿ ಹಾಸಿಗೆಯಲ್ಲಿ ಒಂದಾದರೂ ಕೈ ಊರಿದ್ದೆನೇ? ಇಂದು ಕೈ ಮೀರಿ ಒರಗಿಬಿಟ್ಟೆ ದೇವಾ, ಬೇಕೆಂತ ಮಲಗಲಿಲ್ಲ ದಣಿದಿದ್ದೆ ಅದು ಹೇಗೋ ನಿದ್ರೆ ಹತ್ತಿಬಿಟ್ಟಿತು. ಡುರ್ರಾ ಚಾವಟಿ ಒಂದು ಎಚ್ಚರಿಸಬೇಕಾಯಿತೆ ನನ್ನ! ಇಪ್ಪತ್ತು ವರ್ಷ ಹಾಸುತ್ತಲಿದ್ದ ಗುಲಾಬಿ ಹಾಸಿಗೆಯಲ್ಲಿ ಅರಘಳಿಗೆ ಮಲಗಿದುದಕ್ಕೆ ಇಷ್ಟು ಶಿಕ್ಷೆಯೆ? ಒಂದೆ ಅರ್ಧಗಳಿಗೆಗೆ ಇಷ್ಟು ಶಿಕ್ಷೆಯೆ! ಎಲೈ ತಂದೆ, ಹಾಗಾದರ ಇಪ್ಪತ್ತು ವರ್ಷಗಳಿಂದ ಆ ಹೂವಿನ ರಾಶಿಯಲ್ಲಿ ಮಲಗುತ್ತ ಇರುವ ಅಧಂ ಚಕ್ರವರ್ತಿಗೆ ಇನ್ನೇನು ಶಿಕ್ಷೆ ಇಟ್ಟಿರುವೆ? ಅಧಮ ಅಧಂ! ನೀನು ಈ ಮಹಾರಾಜ್ಯದ ಹಣವನ್ನೆಲ್ಲ ಹೀರಿ ತೂರಿ, ಹಿರಿಯರ ಕೈಲಿ ಸೇವೆ ಮಾಡಿಸಿಕೊಂಡು ದೇವರನ್ನು ಮರೆತು, ಈ ಹೂವಿನ ಹಾಸಿಗೆಯಲ್ಲಿ ಇಪ್ಪತ್ತು ವರ್ಷಗಳಿಂದ ಮಲಗುತ್ತ, ಇದ್ದೀಯಲ್ಲವೆ? ದೇವರು ನಿನಗೇನೂ ಶಿಕ್ಷೆ ಇಟ್ಟಿಲ್ಲವೆ? ತಪ್ಪಾಯಿತು ಹಾಗಲ್ಲ ದೇವ! ಬೇಡ, ತಂದೆ! ನಾನು ಸಾಕಿ ಸಲಹಿದ ಅಧಂ ಕುಮಾರನಿಗ ಶಿಕ್ಷೆ ಕೊಡಬೇಡ. ಅರ್ಧ ಘಳಿಗೆಗೇ ಇಷ್ಟು ಶಿಕ್ಷೆಯಾದರೆ ಇಪ್ಪತ್ತು ವರ್ಷಕ್ಕೆ ಇನ್ನೆಷ್ಟಾದೀತೋ ಎಂದು ಬೆದರುತ್ತಿದೆ ಜೀವ!'' ಹೀಗೆಂದು ಮುದುಕಿ ಬೇಡುತ್ತಿದ್ದಳು

ಅಧಂ ಚಕ್ರವರ್ತಿ ಇನ್ನು ತಡೆಯಲಾರದೆ ಹೋದ, ಒಳಗೆ ನುಗ್ಗಿದ; ಮುದುಕಿಯನ್ನು ತಬ್ಬಿದ, ಮೈದಡವಿದ, ಎತ್ತಿ ತಂದಿಟ್ಟ ಅದೇ ಹೂವಿನ ಹಾಸಿಗೆಯಲ್ಲಿ. ಉಪಚಾರ ಮಾಡಿದ. ತಪ್ಪಾಯಿತೆಂದು ಬೇಡಿಕೊಂಡ ಮಗುವಿನ ಹಾಗೆ ಅತ್ತುಬಿಟ್ಟ

ಮಾರನೆಯ ದಿನವೇ ಅಧಂ ಚಕ್ರವರ್ತಿ ತನ್ನ ಅರಮನೆಯ ಅಧಿಕಾರಿಗಳನ್ನೆಲ್ಲ ಕರಸಿದ. ಮಂತ್ರಿಯನ್ನು ಒರಹೇಳಿದ. ಮಹಾಸಭೆಯ ಮುಂದೆ ತನ್ನ ರಾಜ್ಯವನ್ನು ಮಂತ್ರಿಯ ವಶಕ್ಕ ಒಪ್ಪಿಸಿದ ಅನಂತರ ಅಧಂ ಫಕೀರನಾಗಿ ಕಾಡಿಗೆ ಹೋದ. ಅದೆಂಥಾ ಪಶ್ಚಾತ್ತಾಪ, ಎಂಥಾ ತ್ಯಾಗ!

ಕಡೆಗೆ ಅವನು ಮಹಾಜ್ಞಾನಿಯಾದ ದೇವರ ಪ್ರೀತಿಗೆ ಪಾತ್ರನಾದ.

---

# ನ್ಯಾಯಮೂರ್ತಿ

ರಾಜಪುರಿಯ ಚೌಕದಲ್ಲಿ ಭಾರಿಯಾದೊಂದು ವಿಗ್ರಹವಿತ್ತು. ಅದರ ಬಲಗೈಲಿ ಕತ್ತಿ ಮತ್ತು ಎಡಗೈಲಿ ತಕ್ಕಡಿ. ಅದು ನ್ಯಾಯಮೂರ್ತಿಯ ವಿಗ್ರಹ. ನ್ಯಾಯಶೇಖರ ಮಹಾರಾಯನ ನೆನಪಿನಲ್ಲಿ ನಿಲ್ಲಿಸಿದ್ದರು. ಅಷ್ಟೊಂದು ವಿಶೇಷವಾದ ನಂಬಿಕೆ ರಾಜಪುರಿಯ ಜನಗಳಿಗೆ ತಮ್ಮನ್ನಾಳುವ ಮಹಾಸ್ವಾಮಿಯಲ್ಲಿ ಏನು ಮಹಾ ನ್ಯಾಯ ತೀರ್ಪು ಆಗಬೇಕಾದರೂ ಅಲ್ಲೇ. ಕಡೆಕಡೆಗೆ ನ್ಯಾಯ ತಪ್ಪಿದವರಿಗೆ ಶಿಕ್ಷೆ ಸಹ ಅನೇ ನ್ಯಾಯ ವಿಗ್ರಹದ ಪಾದಗಳಲ್ಲಿ.

ಹೀಗಿರುವಾಗ ನ್ಯಾಯಶೇಖರನು ಸ್ವರ್ಗಕ್ಕೆ ಹೋದನು ಆತನ ಮಗನಾದ ಧರ್ಮಶೇಖರನೂ ಸಹ ಆಳಿ ಅಳಿದನು ಅನಂತರ ಪಟ್ಟಕ್ಕೆ ಬಂದವನೆಂದರೆ ಅರ್ಥಶೇಖರ ಮಹಾರಾಯ ಈ ಸಣ್ಣ ವಿಷಯವು ಅರ್ಥ ಶೇಖರನ ಕಾಲದಲ್ಲಿ ನಡೆಯಿತು.

ಈ ಕಾಲದಲ್ಲಿ ನ್ಯಾಯಮೂರ್ತಿಯ ಪಾದಗಳಿಗೆ ಎರಗುವ ಜನ ಕಡಿಮೆ ಯಾದರು. ಆ ವಿಗ್ರಹಕ್ಕೆ ಸಲ್ಲುತ್ತಿದ್ದ ವಾರ್ಷಿಕ ಎಣ್ಣೆಮಜ್ಜನ ಸಹ ನಿಂತು ಹೋಯಿತು. ಆಕಾಶದಲ್ಲಿ ಎತ್ತಿ ನಿಂತಿದ್ದ ಆ ಧೀರ ಮೂರ್ತಿಯ ಶಿರದ ಕಿರೀಟ, ಕೊರಳು, ಕೊಂಕುಳುಗಳಲ್ಲಿ ಗುಬ್ಬಿ-ಗೀಜಗ, ಗಿಳಿ-ಪಾರಿವಾಳಗಳು ಗೂಡು ಕಟ್ಟಿಕೊಂಡಿದ್ದವು ಜನಗಳ ಗುಂಪು ಬರುವುದು ನಿಂತು ವಿಹಗಗಳ ಪರಿಶೆಯಾಗುವುದು ಹೆಚ್ಚಾಯಿತು. ನ್ಯಾಯತೀರ್ಮಾನದ ಅವಶ್ಯಕತೆ ಯಾರಿಗೆ ಹೆಚ್ಚಾಗಿತ್ತೊ ನಾನು ಕಾಣೆ

ಈ ದಿನ ಅರಮನೆಯಲ್ಲಿ ಬಲು ಗದ್ದಲ ರಾಣಿಯ ಕೊರಳ ಹಾರ ಕಳ ವಾಗಿದೆ ಯಾರು ಕದ್ದರೋ ಗೊತ್ತಿಲ್ಲ.

ರಾಜಗೃಹದಿ ಕೊರಳ ಹಾರ
ಕಾಣದಾಗ ಹುಡುಕಿ ತಡಕಿ
ಹಿಡಿದು ಹುಡುಗಿಯೋರ್ವಳನ್ನು
ತುಡುಗಿಯೆಂದು ಕರೆದು ಅವಳ ತೀರ್ಪನಿತ್ತರು ॥
ಏನು ಅರಿಯದಿದ್ದ ಹುಡುಗಿ
ರಾಣಿವಾಸ ತೊರೆದು ಒಂದು
ಪ್ರಾಣ ನೀಗೆ ತುಡುಗು ಹೊತ್ತು
ತಾನು ನಿಂತು ನೋಡುತಿತ್ತು ನ್ಯಾಯಮೂರ್ತಿಯು ॥

ನಿರಪರಾಧಿಯಾದ ಆ ಬಾಲೆಯು ಪ್ರಾಣವೊಪ್ಪಿಸಿದಳು. ಆ ಪ್ರಾಣವು ಸ್ವರ್ಗಕ್ಕೆ ಹಾರಿಹೋಯಿತೋ ಏನೋ! ದೇವೇಂದ್ರನಲ್ಲಿ ದೂರಿಟ್ಟಿತೋ ಏನೋ! ಅಂತು ಆಕಾಶದ ತುಂಬ ಮೋಡ ತುಂಬಿಕೊಂಡವು. ಜನಗಳು ಮುಖ ಮುಚ್ಚಿಕೊಂಡು ನಡೆದರು ಕಣ್ಣು ಮುಚ್ಚಿದರೆ ಸಾಕು ಆ ಬಾಲೆಯ ಶಿರದಿಂದ ಹರಿಯುತ್ತಿದ್ದ ರಕ್ತದ ಹೊಳೆ. ಆ ದಿನ ಯಾರೂ ಉಣ ಲಿಲ್ಲ, ಉಡಲಿಲ್ಲ, ನಗಲಿಲ್ಲ—'ಏನಂತೆ ಮಹಾ! ಸಾವಿರಾರು ಮುತ್ತಿನ

ಹಾರಗಳು ಕಾಲುಕಸವಾಗಿ ಬಿದ್ದಿರುವ ಕಡೆ, ಒಂದು ಹಾರ ಹೋದರೆ ಏನಂತೆ! ಆ ರೀತಿ, ಅಷ್ಟು ಪಾತ್ರಕ್ಕೆ, ಆ ಹುಡಿಗನ್ನ ಕೊಲ್ಲಿಸುವುದೇ?' ಹೀಗೆಂದು ಜನ ಕೊರಗಿದರು

ಅದೇ ದಿನ ಹೊತ್ತು ತಿರುಗಿದಾಗ ಆಕಾಶದಲ್ಲಿ ಮೋಡಗಳು ಒತ್ತರಿಸಿ ಒಂದವು. ಗಾಳಿ ರೇಗಿ ಎದ್ದಿತು. ಮಿಂಚು, ಗುಡುಗು, ಸಿಡಿಲು ಒಂದು ಒಂದು ಜನ ಬೆದರಿದರು. ನ್ಯಾಯದೇವತೆಯ ಎಡಗೈ ಮುರಿದು ಬಿತ್ತು. ನ್ಯಾಯದ ತಕ್ಕಡಿಯು ದಂಡಿಗೆ ಡೊಂಕಾಗಿ ಹೋಯಿತು. ಪಟ್ಟಿಗಳು ತಕ್ಕಡಿಯ ಸರಪಳಿಯಿಂದ ಕಳಚಿ ಅದೆಲ್ಲೋ ಹಾರ ಹೋದವು ಊರೆಲ್ಲಾ ಬಂದು ನೋಡಿದರು ಆಗ ಎಲ್ಲರಿಗೂ ಆಶ್ಚರ್ಯವಾಗುವಂತೆ—

ಕಡಿದು ಬಿದ್ದ ನ್ಯಾಯಮೂರ್ತಿ
ಎಡದ ಭುಜದ ಕುಹರದಿಂದ
ಹಾರಿತೊಂದು ಕೀಚಬಾಲ
ಸೂರ ಮರದ ಹಣ್ಣಿಗಾಗಿ ಹಣ್ಣಿನೊಂದಿಗ

ಆ ಕ್ಷಣದಲ್ಲಿಯೇ ವಿಚಾರಪರರಾದ—

ಊರ ಜನರು ತರಿಸಿ ಏಣಿ
ಏರಿ ನೋಡೆ ಸರವು ಇತ್ತು
ನಾರು ನೇದ ಗೂಡಿನಲ್ಲಿ
ಹಾರ ಹೊಳೆದು ಹಳಿಯುತಿತ್ತು ರಾಜನೀತಿಯ ॥

ಹೀಗೆ ಅರ್ಧಶೇಖರ ಮಹಾರಾಯನು ವಿಚಾರಮಾಡದಲೆ ನಿರಪರಾಧಿಯಾದ ಅಂತಃಪುರದ ದಾಸಿಯನ್ನು ಕೊಲ್ಲಿಸಿದನು ಅದಕ್ಕಾಗಿ ದುಃಖಪಟ್ಟ ನ್ಯಾಯಮೂರ್ತಿಯನ್ನು ಮೊದಲಿನಂತೆ ಸರಿಪಡಿಸಿದನು ನಿರಪರಾಧಿ ಬಾಲೆಯ ಮೂರ್ತಿಯೊಂದನ್ನು ಆ ನ್ಯಾಯವಿಗ್ರಹದ ಬುಡದಲ್ಲಿ ನಿಲ್ಲಿಸಿದನು. ಅಂದಿನಿಂದ ಪುನಃ ಪ್ರಾರಂಭವಾಯಿತು ನ್ಯಾಯಮೂರ್ತಿಯ ಪರಿಷೆ ವರುಷ ವರುಷ

— —

## ಶುಭಾಂಗ

ಕುಶಲಾಧಿಪತ್ಯಕ್ಕೆ ಶುಭಾಂಗನೇ ರಾಜ. ಶುಭಾಂಗನಿಗೆ ನಾಳೆಯ ದಿನ ಇಪ್ಪತ್ತೆರಡು ವರ್ಷ ತುಂಬುತ್ತೆ. ವರ್ಧಂತಿಯ ದಿನವೇ ಮದುವೆ. ಮಹಾ ಸಂಭ್ರಮದ ಅಲಂಕಾರಗಳು ಅಟ್ಟಹಾಸದಿಂದ ಜರುಗುತ್ತಿವೆ ಚೌಕ ಚೌಕಕ್ಕೂ ಚಪ್ಪರ, ಉದ್ದಾನುದ್ದಕ್ಕೂ ರಸ್ತೆಯ ಇಕ್ಕೆಲಗಳಲ್ಲಿಯೂ

ತೋರಣ, ಎಲ್ಲಾ ಜಗುಲಿಗಳಲ್ಲಿಯೂ ರಂಗೋಲಿ, ಅಲಂಕಾರದ ಲತೆಗಳು, ಹಸೆಗಳು, ಮಹಾ ವೈಭವ! ಆದರೆ ಹೆಣ್ಣು ಯಾರು? ಯಾವ ರಾಜ್ಯದ ರಾಜಕುಮಾರಿ? ಕೇಳುವವರಾರು ಚಪ್ಪರವೆಂದ—ಕಂಬ ನಿಂತು, ಹಂದರ ಹಾಸಿ ಚಪ್ಪರವಾಯಿತು ! ತೋರಣವೆಂದ—ಹಸುರುವಾಣಿ, ಕಾಮುವಾಣಿ. ಪಟ್ಟೆವಾಣಿ ತೋರಣಗಳು ತೂಗಾಡಿಬಿಟ್ಟವು. ರಸ್ತೆಯೆಲ್ಲ ಕಸ್ತೂರಿ, ಪ್ರಜೆಯಲ್ಲ ಒಹದೂರಿ, ಆಕಾಶವೆಲ್ಲ ಅಟ್ಟಹಾಸ, ಊರೆಲ್ಲ ಓಲಗ, ಗಾಳಿಯೆಲ್ಲ ತುತೂರಿ, ಮಾತೆಲ್ಲ ಮನೋಹರ, ಒಟ್ಟಿಬರಿಯೆಲ್ಲ ಪರಿಮಳ—ಅಂತು ಪಟ್ಟಣವೆಲ್ಲ ಅಟ್ಟಹಾಸದಿಂದ ಇದೆ ನಾಳೆಯೇ ವರ್ಧಂತಿ. ನಾಳೆಯೇ ಮದುವೆಯಾಗಬೇಕು.

ಶುಭಾಂಗ ಹೂಸಿದ್ದ ಮಾಡಿ ಎದ್ದು ಕುಳಿತ. ಅರಮನೆಯೆಲ್ಲ ತಿರುಗಿದ ದೀವಟಿಗೆಯ ಬೆಳಕಿನಲ್ಲಿ ಪೇಟಿ ಪೇಟೆಯೆಲ್ಲ ಸವಾರಿಹೊರಟ ಮತ್ತೆ ಅರಮನೆಗ ಬಂದ ಅಂಗಣ ಅಂಗಣ, ಕೋಣೆ ಕೋಣೆಯೆಲ್ಲ ತಿರುಗಿದ

ತೇಜಿ ಎಂಬವಳು ಊಳಿಗದ ಆಳು ಶುಭಾಂಗನು ಆವಳನ್ನು ಕೈಸೆರೆ ಹಿಡಿದು ತಂದಿದ್ದನು ಅವಳೊಡನೆ ಸದಾ ಇರುತ್ತಿದ್ದನು. ಅಥವಾ ತೇಜಿಯೇ ಶುಭಾಂಗನ ಸಮೀಪವರ್ತಿಯಾಗಿದ್ದು, ಸಮಯ ಸಿಕ್ಕಿದಾಗಲೆಲ್ಲ ಸೇವೆ ಮಾಡಲು ಇಷ್ಟಪಡುತ್ತಿದ್ದಳು. ತೇಜಿಯ ನಗುವೆಲ್ಲ ಹೂ ಇದ್ದಂತೆ, ಮತ್ತು ಆಕಯ ಮಾತೆಲ್ಲ ಹಣ್ಣಿದ್ದಂತೆ ಅವಳು ಶುಭಾಂಗನಿಗೆ ಹೇಗಾಗಿ ಕಾಣಿಸುತ್ತಿದ್ದಳೋ ನಾವೇನು ಬಲ್ಲೆವು. ಆಳಾಗಿ ಬಾಳು ಸವಿಸುವುದೇ ಸಾಕಾಗಿತ್ತು ತೇಜಿಗೆ ಆದರೆ ಶುಭಾಂಗನಿಗೆ?

'ಶುಭಾಂಗನು ನಾಳೆ ಮದುವಣಿಗನಾಗುವವನು. ಹೀಗೆಲ್ಲ ನಿದ್ದೆ ಕೆಡಬಾರದು. ಹೇಳಿದುದೆಲ್ಲ ತಿಳಿದು ಮಾಡುವಂಥ ಆಳುಗಳಿರುವಾಗ್ಗ ಅವನೇಕ ತಿರುಗಬೇಕು? ಬಾರದು.' ತೇಜಿ ಹೀಗೆಲ್ಲ ಹೇಳಿದರೆ ಶುಭಾಂಗ ನರಪತಿಯು ಕೇಳುವವನಲ್ಲ

ಯಾವುದೋ ಪರಾರಿಯ ಬಾಗಿಲು ತೆಗೆದನು. ತೇಜಿ ದೀಪ ತೋರಿದಳು. ಶುಭಾಂಗನು ಬಂಗಾರದ ಪರಾತದಲ್ಲಿ ಆಭರಣಗಳನ್ನೆಲ್ಲ ಆರಿಸಿಟ್ಟನು ಎಲ್ಲೆಲ್ಲೋ ಗೋಡೆಗಳಲ್ಲಿ ಮರಸಿಟ್ಟ ಜವಾಹಿರಿ ಗೂಡುಗಳೆಲ್ಲ ಬಿಚ್ಚಿದನು.

ಅಲ್ಲೊಂದು ಪದಕ, ಇಲ್ಲೊಂದು ಮುಂಜೀರ, ಇನ್ನೊಂದು ಒಂಕಿ, ಮತ್ತೊಂದು ಪಡ್ಯಾನಾ, ಹೀಗೆಲ್ಲ ತೆಗೆದು ಪರಾತದಲ್ಲಿ ಇಟ್ಟು ಖಾಸ ಕೋಣೆಗೆ ಬಂದನು.

ತೇಜಿ:– ರಾಜಾಧಿರಾಜ ಶುಭಾಂಗ ಮಹಾರಾಜ! ನನಗೆ ಅವೆಲ್ಲ ಎಲ್ಲೆಲ್ಲಿ ಇವೆಯೆಂಬುದು ಗೊತ್ತು. ತೆಗೆದೆಲ್ಲವನ್ನೂ ಅಳವಡಿಸುವೆನು ಅಪ್ಪಣೆ ಮಾಡಿರಿ ನೂತನ ವಧುವಿಗಾಗಿ ಅದೇನೇನು ಬೇಕೋ ಹೇಳಿರಿ!

ಶುಭಾಂಗ – ದಿಟ. ಆದರೆ ನನ್ನ ರಾಣಿಗೆ ತಕ್ಕ ಒಡವೆಗಳು, ಶೀರೆಗಳು ನಿನಗೆ ಗೊತ್ತಾಗುವುದೆಂತು ತೇಜಿ? ನಾನೇ ಆರಿಸಬೇಕಲ್ಲವೆ?

ತೇಜಿ:– ಆ ರಾಜವಧುವಿನ ರೂಪು ಲಾವಣ್ಯಗಳನ್ನೆಲ್ಲ ವರ್ಣಿಸಿ ಹೇಳಿ ಬಿಡೋಣಾಗಲಿ, ನಾನೇ ಆರಿಸಿಡುವೆನು ಎಂತೂ ನಾನೇ ಆ ರಾಣಿಗೆ ಅನು ಚರಳು. ನಾನೇ ಸಖಿ, ನಾನೇ ದಾಸಿ, ನಾನೇ ಆರಾಧಕಳು ಆ ರಾಣಿ ಬಂದ ನಂತರ ಈ ರಾಜನಿಗೆ ಇನ್ನು ಮನ್ನಣೆ ಎಲ್ಲಿಯದು? ನಾನುಂಟು ಶ್ರೀ ರಾಜವಧುವುಂಟು!

ಶುಭಾಂಗ:– ಮನ್ನಣೆ ಬೇಡವೇ ಬೇಡ. ಪ್ರೀತಿಸಾಕು ತೇಜಿ! ಇರಲಿ, ಆ ನಾಳಿನ ವಧು-ರಾಣಿ ನಿನ್ನಂತೆಯೇ ಇದ್ದಾಳೆ. ತಿದ್ದಿದ ಹುಬ್ಬು, ತುಟಿ, ಜೈತಲೆ ಮತ್ತು ಮುದ್ದಾದ ಮುಖ, ಮಾತು, ರೀತಿ ಎಲ್ಲ ತೇಜಿಯಂತೆ. ಮಿರುಗಿಟ್ಟ ತೇಜಸ್ವಿನಿಯೇ!

ತೇಜಿ:– ಹಾಗಿದ್ದರೆ ನನಗೇ ಎಲ್ಲ ಇಟ್ಟು ನೋಡಿ ತೆಗೆದಿಡುವಿರಾ! ಏನು ನಿಮ್ಮ ಚಿತ್ತ?

ಶುಭಾಂಗ.– ಎಲ್ಲ ನೋಡಿ ತೊಡಿಸುವೆನು. ಆಗ ನನ್ನೆದೆಗೆ ನೆಮ್ಮದಿ!

ತೇಜಿ:– ಇಡದೆ ತೊಡದೆ ನೋಡ ನಾನೇ ಹೇಳಿಬಿಡುತ್ತೇನೆ. ನಿಮ ಗೇಕೆ ತೊಂದರೆ?

ಶುಭಾಂಗ – ಎಲ್ಲಿಯ ಮಾತು ತೆಗೆ! ಇದು ನೋಡು, ನನ್ನ ತಾಯಿ ಯವರ ಕಂಠೀಹಾರ! ಇದೊ ಅವರದೇ ಉಂಗುರ ಇದೂ ಅವರದೇ..

ಹೀಗೆನ್ನುತ್ತ ಒಂದೊಂದಾಗಿ ಅವಳಿಗೆ ತೊಡಿಸುತ್ತ ಬಂದನು ಸಲು ಗೆಯ ಮಾತು ರೀತಿಗಳು ಇಂದಿನ ವರೆಗೆ ಸಹಿಹೋಗಿತ್ತು. ಈ ದಿನದಿಂದ

ತೇಜಿಗೆ ಸೇರಿದ ಸೊಗಸಲ್ಲ ಅವೆಲ್ಲ. ಆದುದರಿಂದ ಅವಳು ಶುಭಾಂಗನ ಮೇಲೆ ಸಿಟ್ಟಾದಳು ನಾಳೆ ಪಟ್ಟದ ಕುಮಾರಿಕೆಯನ್ನು ವಿವಾಹವಾಗುವ ಶುಭಾಂಗ ಮಹಾರಾಜನು ಕೀಳು ದಾಸಿಯಾದ ತೇಜಿಯನ್ನು ಮುಟ್ಟಲೇ ಬಾರದು ಖಂಡಿತ ಕೂಡದು ಆತನ ಒಲವೆಲ್ಲ ರಾಜವಧುವಿಗೇ ಸರಿ

ಶುಭಾಂಗನು ಯಾವುದನ್ನು ಕೇಳದಲೆ ಎಲ್ಲವನ್ನು ತೊಡಿಸಿ ಕನ್ನಡಿಯ ಮುಂದೆ ನಿಲ್ಲಿಸಿ ಕೆಂಪಾದ ಅವಳ ಗಲ್ಲಕ್ಕೆ ಒಂದೇ ಒಂದು ಮುತ್ತಿಟ್ಟನು. ತೇಜಿ ಎಲ್ಲ ಒಡವೆಗಳನ್ನು ತೆಗೆದು ಬಿಸುಟು, ಎಲ್ಲಿಯೋ ಓಡಿಹೋದಳು. ರಾಜಕುಮಾರನು ವಾತಾಯನದಲ್ಲಿ ನಿಂತು ಹೀಗೆ ಹೇಳಿದನು: ' ತೇಜಸ್ವಿನೀ ! ನೀನು ಈ ರೀತಿ ಓಡಿ ಹೋಗಬಾರದು. ನಿನ್ನಂಥವಳೂ ಸಹ ಒಂದು ರಾಜ್ಯಕ್ಕೆ ರಾಣಿಯಾಗಬಲ್ಲೆ ಎಂಬುದನ್ನು ನಾನು ಜಗತ್ತಿಗೆ ತೋರಬಾರದೇನು ? ಬಿಡು, ನನ್ನನ್ನು ಲಗ್ನವಾಗದಿದ್ದರೆ ನಾಳೆ ಬರುವ ಇನ್ನಾರಾದರು ರಾಜನಿಗೆ ಕೊಟ್ಟು ವಿವಾಹ ಮಾಡಿಸಿಬಿಡುತ್ತೇನೆ. ಇದು ಖಂಡಿತ! ನನ್ನಾಣೆಗೂ ನೀನು ಒಂದು ಹೆಜ್ಜೆ ಮುಂದಿಡಕೂಡದು, ನನ್ನಾಣೆ! '

ಈ ಮಾತನ್ನು ಕೇಳಿ ತೇಜಿ ಹಿಂತಿರುಗಿದಳು. ಒಡವೆ ವಸ್ತ್ರಗಳನ್ನೆಲ್ಲ ತೆಗೆದು ಒಪ್ಪವಾಗಿಟ್ಟಳು ನಾಳೆ ಏನಾದೀತೋ ಬಲ್ಲವರಾರು ! ತೇಜಿಗೆ ಇರುಸು ಮುರುಸು.

ವಧು-ಕುಮಾರಿಕೆ ಯಾರು ? ಯಾರಿಗೂ ತಿಳಿಯದು ಅಂತು ಗೆಳೆಯ ರಾಜರೆಲ್ಲ ನೆರೆದಿದ್ದಾರೆ ಇವೆಲ್ಲ ವಧುವಿಗೆ ಒಡವೆ ವಸ್ತ್ರಗಳು ! ಅವೆಲ್ಲ ಬೀಗರ ಬೀಡಾರ ! ಮಜ್ಜನ ಭೋಜನ ಮನೆಗಳು ಇವು ! ದೂರದಿಂದ ಬಂದವರಿಗೆಲ್ಲ ಅಲ್ಲಿ ಏರ್ಪಾಡಾಗಿದೆ. ಇನ್ನೇನಾಗಬೇಕು !

ಆದರೆ ವಧು ಯಾರು..?

ಶುಭಾಂಗನು ಸಭಾಮಂಟಪಕ್ಕೆ ಬಂದನು ನೆಚ್ಚಿನ ಗೆಳೆಯ ರಾಜನಾದ ವಿಕ್ರಮಸಿಂಹನನ್ನು ಬರಮಾಡಿಕೊಂಡನು. ಆತನ ಕಿವಿಯಲ್ಲಿ ಏನೋ ಪಿಸುಗುಟ್ಟಿದನು. ಆತನು ಮುಗುಳು ನಗೆಯಿಂದ ಕೂಡಿದವನಾಗಿ ತನ್ನ ಪೀಠಕ್ಕೆ ಹಿಂತಿರುಗಿದನು.

' ಸುಮುಹೂರ್ತಾ ಸಾವಧಾನ! ಸುಲಗ್ನಾ ಸಾವಧಾನ ! '

' ಶ್ರೀಶುಭಾಂಗ ಮಹಾರಾಜರೇ ಇತ್ತಿತ್ತ..'

' ಶ್ರೀ ರಾಜವಧೂ ಕುಮಾರಿಕೆಯು, ಅಲಂಕಾರಪೂರ್ತಿಯಾಗಿದ್ದರೆ ದಯಮಾಡಿಸಬಹುದೊ ? '

ಆಗ ವಿಕ್ರಮರಾಯನು ಎದ್ದು ಬಂದನು. ಅಲಂಕಾರ ಮಾಡಿಕೊಂಡು ಶುಭಕಾರ್ಯಕ್ಕೆ ಸಿದ್ಧನಾಗಿದ್ದನು

ವಿಕ್ರಮ:- ರಾಜಪುರೋಹಿತರೇ ! ಈಗಲೀಗ ಮೊಟ್ಟಮೊದಲಾಗಿ ನನ್ನ ಕುಮಾರಿಕೆಯೊಬ್ಬಳಿಗೆ ಜನ್ಮಮಹೋತ್ಸವ ಮತ್ತು ನಾಮಕರಣ ಮಹೋತ್ಸವ ಜರುಗಿಸಬೇಕು, ತಾವುಗಳು

ಪುರೋಹಿತ.- ಹಾಗಿದ್ದರೆ ವಿವಾಹ !

ವಿಕ್ರಮ:- ನನ್ನ ಕುಮಾರಿಕಯುದೇ ವಿವಾಹ ಈ ದಿನ.

ಪುರೋಹಿತ:- ವರನಾರು, ನಿಮ್ಮ ಕುಮಾರಿಕೆಗೆ ?

ವಿಕ್ರಮ – ಶ್ರೀ ಶುಭಾಂಗ ಮಹಾರಾಜ !

ಎಲ್ಲರಿಗೂ ಆನಂದವಾಯಿತು ಶ್ರೀ ವಿಕ್ರಮರಾಯನು ಪರಿಚಿತನಾದ ಮಹಾಪ್ರಭು ನೆರೆ ರಾಜ್ಯಾಧಿಪತನು ದಾನ, ಧರ್ಮ, ನೀತಿನಿಪುಣನು ಆತನ ಕುಮಾರಿಕಯೇ ಸರಿಯಾದವಳು, ಶುಭಾಂಗ ಮಹಾರಾಜನನ್ನು ವಿವಾಹವಾಗಲಿಕ್ಕೆ

ಆದರೆ ಈ ವಿಚಾರವನ್ನು ಈ ಮುಹೂರ್ತದ ವರವಿಗೆ ತಿಳಿಸಲಿಲ್ಲವೇಕ ? ಏನೋ ರಾಜರ ಗುಟ್ಟು !

ತೆಳ್ಳನ್ನ ರೇಶಿಮೆಯ ಬುರಕಿ ಹಾಕಿದ ಒಳುಒಳುಕುವ ಕುಮಾರಿಕೆ ಯೊಬ್ಬಳು ಬಂದು ನಿಂತಳು. ಮೊದಲು ಜನ್ಮೋತ್ಸವ ಅನಂತರ ನಾಮಕರ ಣೋತ್ಸವಗಳಾದವು. ' ಶ್ರೀ ವಿಕ್ರಮರಾಯನ ಪುತ್ರಿ, ಪರಾಕ್ರಮರಾಯನ ಪೌತ್ರಿ, ಸಿಂಹವಿಕ್ರಮರಾಯನ ಪ್ರಪೌತ್ರೀ–ತೇಜಸ್ವಿನೀ ನಾಮ್ನೀ—! ' ಎಂದು ಘೋಷಣೆಯಾಯಿತು.

ಆದರೆ ತೇಜಿಗೆ ಯಾರ ಕೂಡ ಲಗ್ನವೋ ಅವಳಿಗೇ ತಿಳಿಯದು. ಅಷ್ಟೇ ಅಲ್ಲ ಶ್ರೀಶುಭಾಂಗ ಪ್ರಭುವನ್ನು ಅದಾವ ರಾಜಕುಮಾರಿ ವಿವಾಹ ವಾಗುವಳೋ ಅವಳನ್ನು ಕಂಡ ಪ್ರಜೆಗಳು ಸಹಾ ಯಾರೂ ಇರಲಿಲ್ಲ

ವಿಕ್ರಮರಾಯ ವೇದಿಕೆಯ ಮೇಲೆ ನಿಂತು ' ಸಾಲಂಕೃತಾಂ ಇಮಾಂ

ಕನ್ಯಾಂ ತೇಜಸ್ವಿನಿ ನಾಮ್ನೀಂ ' ಎಂದು ಶುಭಾಂಗನ ಕೈ ಮೇಲೆ ಆಕೆಯು ಕೈ ಇಟ್ಟು ಧಾರೆ ಎರೆದನು. ತೇಜಸ್ವಿನಿಗೆ ಯಾರು ವರನೋ ನೋಡ ಬೇಕಂದು ಮಹದಾಶೆ ಶ್ರೀಶುಭಾಂಗನಿಗೆ ಗೆದ್ದವರು ಯಾರಂದು ಹಂಗಿಸಿ ಬಿಡಬೇಕಂದಾಶೆ. ಈ ಸಮಯದಲ್ಲಿ ಶುಭದೃಷ್ಟಿಗಾಗಿ ಪರದೆ ಓರೆಯಾ ಯಿತು ಪರಸ್ಪರರ ಕಣ್ಣು ಕೂಡಿದವು ತೇಜಸ್ವಿನಿಯಾದ ತೇಜಿಗೆ ದುಃಖವೇ ಇಮ್ಮಡಿಸಿತ್ತು. ತನ್ನಂಥಾ ಹೀನ ಕನ್ಯೆಯನ್ನು ಲಗ್ನವಾಗಿ ಶ್ರೀಶುಭಾಂ ಗನು ತನ್ನ ಪದವಿ ಕಳೆದುಕೊಂಡನಲಾ! ಹಲವಾರು ರಾಜಕುಮಾರಿಯರು ಕಾದಿರುವಾಗ ತನ್ನನ್ನೇ ಹಟದಿಂದ ವರಿಸಿದನಲಾ! ಎಂದು ಬಹು ದುಗುಡ ವಾಯಿತು, ಕಣ್ಣೀರಿಟ್ಟಳು. ಬಗ್ಗಿ ಪಾದಕ್ಕೆ ಮುತ್ತಿಟ್ಟು ತಲಬಾಗಿ ನಿಂತಳು.

ಶ್ರೀಶುಭಾಂಗನು ಅವಳನ್ನು ಹತ್ತಿರಕ್ಕೆ ಸರಿಸಿಕೊಂಡು ನಿಂತನು. ಇವಳೇ ತನ್ನ ನೂತನ ರಾಣಿಯೆಂದು ಪ್ರಜೆಗಳಿಗೆಲ್ಲ ತೋರಿಸುತ್ತಾ ಹೀಗೆಂ ದನು: ' ಶ್ರೀ ಕುಶಲಾಧಿಪತ್ಯದ ಪ್ರೀತಿಯ ಪ್ರಜಾವೃಂದವೇ ಲಾಲಿಸಿರಿ. ಈ ರಾಣಿಯು ನಿಮಗೆಲ್ಲರಿಗೆ ಪರಿಚಿತಳಾದ ತೇಜಿ, ನನ್ನ ದಾಸಿ! ಈಕೆಯನ್ನು ನೀಚರ ಸೆರೆ ಬಿಡಿಸಿ ತಂದಿದ್ದೆನು. ನನ್ನ ತಾಯಿಯಾದ ರಾಜಮಾತೆಯು ಈಕೆಯ ಗುಣ, ಶೀಲಗಳಿಗೆ ಮೆಚ್ಚಿ, ನನ್ನ ಸಹಧರ್ಮಿಣಿಯಾಗಿರಲು ಇಷ್ಟ ಪಟ್ಟಿದ್ದರು. ಈ ತೇಜೋವತಿಯ ಹೀನ ಕುಲವನ್ನು ಸ್ವರ್ಣಮಯವಾಗಿ ಮಾಡಲೋಸುಗವೇ ಶ್ರೀ ವಿಕ್ರಮರಾಯರು ದತ್ತು ಸ್ವೀಕಾರ ಮಾಡಿ ದ್ದಾರೆ. ಈಗ ನಾನು ತೇಜಿಯನ್ನು ಶ್ರೀವಿಕ್ರಮರಾಜರ ಮಗಳಾಗಿ ವರಿ ಸಿದ್ದೇನೆ. ಸುಗುಣಿಯಾಗಿ ಸುಶೀಲೆಯಾದ ಮಾನವತಿಯು ಈ ರಾಜ್ಯದ ರಾಣಿಯಾಗಲು ಯೋಗ್ಯಳಲ್ಲವೆ? ನೀವೆಲ್ಲರೂ ಈಕೆಗೆ, ಈ ತೇಜಸ್ವಿನೀ ರಾಜ ಕುಮಾರಿಗೆ, ಶ್ರೀ ಕುಶಲಾಧಿಪತ್ಯದ ರಾಣಿಗೆ, ಜಯಘೋಷ ಮಾಡುವಿರಾ!'

ಹೀಗೆಂದು ಶ್ರೀಶುಭಾಂಗನು ಹೇಳಿದ ತಕ್ಷಣವೇ ಜಯಘೋಷವಾ ಯಿತು. ತೇಜಸ್ವಿನಿಯು ಒಂದು ಪದವಿಯನ್ನು ಪಡೆದಳು. ಶುಭಾಂಗನು ಒಂದು ಅಡ್ಡಿಯನ್ನು ದಾಟಿದನು. ಪ್ರಜೆಗಳು ಒಂದು ಹೊಸ ಮೆಟ್ಟಿಲನ್ನು ಹತ್ತಿದರು.

---

# ಜೋಳದ ಕಾಳು

ಒಂದಾನೊಂದು ಊರು. ಆ ಊರಲ್ಲಿ ಒಬ್ಬ ಬಡ ಹುಡುಗ; ಆ ಹುಡುಗನ ತಾಯಿ ಸತ್ತುಹೋದಳು. ಸಾಯುವಾಗ ಆ ತಾಯಿ ಈ ಹುಡುಗನ ಕೈಲಿ ಒಂದೇ ಒಂದು ಜೋಳದ ಕಾಳು ಇಟ್ಟು ಸತ್ತಿದ್ದಳು. ಆ ಬಡ ಹುಡುಗನ ಆ ತಾಯಿ ಸಾಯುವಾಗ ಹೀಗ ಹೇಳಿದಳು—'ನೋಡು ಮಗ! ನಮಗೆಲ್ಲ ಜೋಳವೇ ಹಿಗ್ಗು ನೊಗ. ನಿಮ್ಮಯ್ಯ ಸಾಯುವಾಗ ಕಡೇ ಉಸುರಲ್ಲಿ ಈ ಕಾಳು ತೆಗೆದುಕೊಟ್ಟರು. ನಡೂ ಹೊಲದಾಗೆ ನಡೂ ತೆನ ಮೇಗಣ ನತ್ತೀ ಕಾಳು. ತಲೆಗಿಂಬಿನ ಬುಡದಾಗೇ ಇತ್ತು, ಈಟು ದಿನಾನೂ! ತಗೋ ಮೊಗಾ! ನಿಮ್ಮಯ್ಯ ಕರೀತಾರೆ ಮೇಗಿಣಿಂದ. ಜೋಳದ ಕಾಳು ಭದ್ರ.'

ಒಂದೇ ಒಂದು ವಿಷಯ ಮರೆತಿದ್ದೆ. ಅದೇನು ಎಂದರೆ ಆ ಬಡ ಹುಡುಗನ ತಂದೆಯ ವಿಚಾರ. ಆ ಹುಡುಗನ ತಂದೆಯು ಆಗಲೇ ಸತ್ತು ಸ್ವರ್ಗದಲ್ಲಿದ್ದನು. ನೋಡು ಈಗ ಆ ಹುಡುಗನಿಗೆ ಬಳಗ ಯಾರಿದ್ದಾರೆ? ಯಾರೂ ಇಲ್ಲ. ತಂದೆ ತಾಯಿ ಇಲ್ಲದ ತಬ್ಬಲಿಯನ್ನು ಯಾರೂ ಹತ್ತಿರ ಸೇರಿಸಲಿಲ್ಲ. ಮನೆ ಇರದೆ, ಜನ ಇರದೆ ಆ ಹುಡುಗ ಆ ಊರಲ್ಲಿ ಏನು ಮಾಡಬೇಕು? ಊರು ಬಿಟ್ಟು ಹೊರಟೇ ಬಿಟ್ಟ. ಆದರೆ ಜೋಳದ ಕಾಳು ಮಾತ್ರ ತಲೆಗೆ ಸುತ್ತಿದ ಚೌಕದ ತುದಿ ಸೆರಗಿನ ಗಂಟಿನಲ್ಲಿ ಇತ್ತು. ಅಲ್ಲೇ ಭದ್ರವಾಗಿತ್ತು!

ಆ ಬಡ ಹುಡುಗನು ಊರೂರು ತಿರುಗುತ್ತ ಹೊರಟನು. ಹಾದಿಯಲ್ಲಿ ಒಬ್ಬ ಮುದುಕನು ಕುಂಟಿಗೊಂಡು ಬಂದನು. ಆತನು ನಗುನಗುತ್ತ ಇದ್ದನು. ಆ ನಗುಮೊಗ ನೋಡಿ ಆ ಹುಡುಗನಿಗೆ ಬಹಳ ಆನಂದವು ಆಯಿತು. ಧೈರ್ಯ ಮಾಡಿ ಕೇಳಿದನು: 'ಓ ಅಜ್ಜಯ್ಯ ಆರೋಗ್ಯವ?'

ಅದಕ್ಕೆ ಆ ಮುದುಕನು 'ಕಂದಮ್ಮ! ನೀನು ಆರೋಗ್ಯವ? ಪುಟ್ಟಣ್ಣಿ ಪುಟ್ಟಣ್ಣ ಎಲ್ಲಿಗೆ ಹೊರಟೆಯಣ್ಣಾ?' ಎಂದು ಕೇಳಿದನು

ಒಡ ಹುಡುಗ:– ನಾನು ಪ್ರಯಾಣ ಹೊರಟೆ ನಮ್ಮಮ್ಮ ಮುದುಕಿ ಅಪ್ಪನ್ನ ಹುಡುಕಿ ಹೊರಟೇಹೋದಳು.

ಮುದುಕ:– ಎಲ್ಲಿಗೆ? ಏನಣ್ಣಾ?

ಒಡ ಹುಡುಗ.– ಮೇಲಿಕ್ಕೇಂತ!

ಮುದುಕ.– ಸತ್ತು ಸ್ವರ್ಗಕ್ಕೋ! ಗೊತ್ತಾಯಿತು ನೀನು?

ಒಡ ಹುಡುಗ – ನಾನೂ ಹೀಗೇ ಹೊರಟೆ ನನ್ನ ಹತ್ತಿರ ಒಂದೇ ಒಂದು ಮುತ್ತಿನಂಥ ಜೋಳದ ಕಾಳಿದೆ. ಅದನ್ನ ಯಾರಾದರೂ ಕಿತ್ತು ಕೊಂಡಾರೇನಜ್ಜ?

ಮುದುಕ:– ಮೂಟೆ ಮೂಟೆ ಜೋಳ ಹೊತ್ತರೂ ಕೇಳೋರಿಲ್ಲ. ನಿನ್ನ ಮುತ್ತಿನಂಥ ಜೋಳದ ಕಾಳಿಗೆ ಅದಾರಪ್ಪ ಬರುತ್ತಾರ?

ಒಡ ಹುಡುಗನಿಗೆ ಆತಂಕ ಕಡಿಮೆಯಾಯಿತು ಹೆದರಿಕೆಯೇ ಇಲ್ಲದೆ ಮುಂದೆ ಹೊರಟ. ದಾರಿಯಲ್ಲಿ ಒಂದು ಹಳ್ಳಿ ರಾತ್ರಿ! ಕತ್ತಲು! ದೂರ ಇನ್ನೆಲ್ಲಿ ಹೋಗುವುದು' ಆ ಹಳ್ಳಿಯೊಳಕ್ಕೆ ಹೋದ ಮೊದಲು ಸಿಕ್ಕಿದ ಮನೆ ಬಾಗಿಲು ತಟ್ಟಿದ.

'ಯಾರ್ರೀ, ಗೌಡರೇ! ರಾತ್ರಿ ಇಲ್ಲಿ ಮಲಗಿದ್ದು ಬೆಳಗ್ಗೆ ಎದ್ದು ಮುಂದೆ ಪ್ರಯಾಣ ಹೋಗಬಹುದೋ? ಏನ್ರಿ?' ಎಂದು ಕೂಗಿದ

'ಅಯ್ಯೋ ಪುಟ್ಟ ಹುಡುಗ ಕಣ್ರೋ! ಬಾಪ್ಪ! ನೀರೂ ಬೆಲ್ಲ ಬೇಕೇನಪ್ಪ? ದೂರದಿಂದ ಬಂದೆಯಾ? ಕಾಲು ತೊಳಕೋಪ್ಪ ಹಿಡಿ ನೀರು!'

'ಕಾಲು ತೊಳದೆ. ಕರೆ ಪರೀಲಿ ಬುತ್ತೀ ತಿಂದೆ ಮಲಗಲಿಕ್ಕೆ ತಾವ'

'ಹೋಹೋ! ಏನ್ರೀ ಹುಡುಗ ಮಲಗಲಿಕ್ಕ ಆ ಕಿಟಕಿ ಒಳೀ ಜಾಗಾ ಮಾಡಿರಿ'

'ನಾನು ಒಡ ಹುಡುಗ. ನನ್ನ ಒಳಿ ಒಂದೇ ಒಂದು ಜೋಳದ ಕಾಳಿದೆ'

'ಅಯ್ಯೋ ಕೂಸೇ! ನಮ್ಮ ಮನೇಲಿ ಮೂಟೆ ಮೂಟೆ ಜೋಳ ಇದೇಯಪ್ಪ. ನಿನ್ನ ಕಾಳು ಇನ್ಯಾರು ಮುಟ್ಟಿಯಾರು! ಮಲಗು. ಸುಖ ವಾಗಿ ಕನಸು ಕಾಣೋವಂತೆ!'

ಬಡಹುಡುಗ ಜೋಳದ ಕಾಳನ್ನು ಕಿಟಕಿಯ ಒಳಿ ಎದ್ದು ಕಾಣುವಂತೆ ಇಟ್ಟು ಮಲಗಿಬಿಟ್ಟನು. ರಾತ್ರಿ ಕನಸಿನಲ್ಲಿ ಅಮ್ಮನ ಸಂಗಡಲೇ ಇದ್ದನು. 'ಜೋಳ ಭದ್ರ' ಎಂದು ಅಮ್ಮ ಹೇಳಿ ಹೊರಟುಹೋದಳು. ಇವನಿಗ ಎಚ್ಚರವಾಯಿತು. ಅಷ್ಟು ಹೊತ್ತಿಗೆ ಗೌಡರ ಹುಂಜ—'ಒಕ್ಕಳ ಜೋಳ ಕೂಳ್ಕೊ! ಕೂಕ್ಕಳ ಕೂಳೋ ಕೊರಬ್ರೀ!' ಎಂದು ಕೂಗಿಕೊಂಡಿತು. ಬಡ ಹುಡುಗ ಎದ್ದುಬಿಟ್ಟ.

ಬಡ ಹುಡುಗ ಎದ್ದು ನೋಡಿದನೆ ಜೋಳದ ಕಾಳು ಎಲ್ಲಿರಬೇಕು? ಇಲ್ಲವೇ ಇಲ್ಲ ಆಗ ತಾನೇ ಗೌಡರ ಹುಂಜ ಆ ಜೋಳದ ಕಾಳನ್ನು ಕುಕ್ಕಿ ಕುಕ್ಕಿ ಗುಳಕ್ಕನ್ನಿಸಿತ್ತು. ಬಡ ಹುಡುಗ ಬಿಕ್ಕಿ ಬಿಕ್ಕಿ ಅಳುವದಕ್ಕೆ ಆರಂಭಿಸಿದನು. ಏನೇನು ಮಾಡಿದರೂ ಸಮಾಧಾನವಾಗಲಿಲ್ಲ ಅಂಬಲಿ ಕೊಟ್ಟರು ಮುದ್ದೆ ಕೊಟ್ಟರು, ಅವರೆ ಎಸರು ಕೊಟ್ಟರು. ಏನೇನು ಕೊಟ್ಟರೂ ಸುಮ್ಮ ನಾಗಲಿಲ್ಲ

ಆಗ ಗೌಡತಿ ಗೌಡರಿಗೆ ಹೇಳಿದಳು. ಗೌಡರು ಬಂದು 'ಮೊಗಾ ಕೂಸೇ, ಕೋಳೀ ತಕ್ಕೋ, ಜೋಳದ ಬದಲಿ! ಆಯಿತೇನಪ್ಪ? ನಿನ್ನ ಜೋಳ ನುಂಗಿದ್ದಕ್ಕೆ ಅದಕ್ಕೆ ಅದೇ ಸಿಕ್ಷೆ! ಕೋಳೀ ಹುಂಜ ಬಗಲಿಗಿಟ್ಟು ನಡೀತಿರು! ಹೊರಡಪ್ಪಾ!'

ಬಡ ಹುಡುಗನಿಗೆ ಬಹಳ ಸಂತೋಷ ನಗುತ್ತ ನಲಿಯುತ್ತ, ಕುಣಿಯುತ್ತ, ಕುಪ್ಪಳಿಸುತ್ತ ಹೊರಟೇ ಹೋದ ಕೋಳೀಹುಂಜ ಕೊಂಕುಳಲ್ಲಿ ಇತ್ತು. ಕೂಗುತ್ತಿತ್ತು 'ಒಕ್ಕೋ ಜೋಳ ಕೊಳ್ಕೋ, ಕೊಳ್ಕೊ! ಕೂಳ್ಕೋ!' ಅನಂತರ ಏನಾಯ್ತು?

ಸೊಕ್ಕಿದ ಹುಂಜ ಸೊಂಟ ಬಿಟ್ಟು<br>
ಬೆಕ್ಕಿನ ಬಾಯಿಗೆ ಬಿದ್ದೋಯ್ತು!<br>
ಮೇಲೆ ಬಿದ್ದ ಮೂಳ ಬೆಕ್ಕು<br>
ಕಾಳ ನಾಯಿ ಪಾಲಾಯ್ತು!<br>
ಆಳಾಗಿದ್ದ ಕಾಳನಾಯಿ<br>
ಗೂಳೀ ತಿವಿದು ಹಾಳಾಯ್ತು!

ಗೂಳೀ ಹತ್ತಿ ಹಳ್ಳೀ ಹೊಕ್ಕು
ಬೆಳ್ಳೀ ಹೆಣ್ಣು ಸಿಕ್ಕೊಯ್ತು!

ಹೀಗೇ ತಿರುಗೀ ತಿರುಗೀ, ಬಡ ಹುಡುಗ ಏನೇನೋ ಸಂಪಾದಿಸಿ, ಏನೆಲ್ಲ ಕಳೆದೇ ಬಿಟ್ಟ— ಹುಂಜ ಹೋಯ್ತು ಬೆಕ್ಕು ಬಂತು,
ಬೆಕ್ಕು ಹೋಯ್ತು ನಾಯಿ ಬಂತು,
ನಾಯಿ ಹೋಯ್ತು ಗೂಳಿ ಬಂತು,
ಗೂಳಿಯೂ ಹೋಯಿತು— ಅನಂತರ ಬಂದದ್ದೇನು?

ಚಂದೊಳ್ಳೀ ಹೆಣ್ಣು ಬೆಳ್ಳೀ ಹಾಗೆ ಬೆಳ್ಳಗಿದ್ದ ಒಳ್ಳೇ ಹೆಣ್ಣು. ಆದರ ಹೆಣ್ಣು ಸಿಕ್ಕಿದರೆ ಮದುವೆ ಮಾಡಿಕೊಂಡು ಸುಖವಾಗಿರಬಾರದೆ, ಹುಡುಗ? ಊಹುಂ! ಅವನಿಗೆ ಜೋಳವೇ ಬೇಕಂತೆ!

ಹೀಗೇ ಹೊರಟುಬಿಟ್ಟ 'ಬೆಳ್ಳೀ ಹೆಣ್ಣು ತಗೊಂಡು, ಯಾರಾದರೂ ಮುತ್ತಿನ ಜೋಳ ಕೊಡುತ್ತೀರಾ? ಅಪ್ಪಾ! ಅವ್ವಾ!' ಎಂದು ಕೂಗುತ್ತ ಹಳ್ಳಿ ಹಳ್ಳಿ ತಿರುಗಿಬಿಟ್ಟ, ಆ ಬಡ ಹುಡುಗ.

ಕಡಗೆ, ಕಟ್ಕಾಸುಕಡೆಗೆ, ಒಬ್ಬ ರೈತ, ಒಂದು ಜೋಳದ ಕಾಳು ಆರಿಸಿ ಇಟ್ಟಿದ್ದ. ಒಳ್ಳೇ ಜೋಳದ ಕಾಳು! ಮುತ್ತಿನಂಥ ಕಾಳು! 'ನಡೂ ಹೊಲದಾಗ, ನಡೂ ತೆನೇ ಮೇಗಣ, ನೆತ್ತೀ ಕಾಳು!' ಆ ಹಳ್ಳಿಯ ರೈತ ಹೇಳಿಬಿಟ್ಟ 'ಹೈದ, ಆ ಹೆಣ್ಣು ಕೊಡು, ಅವಳು ನನ್ನ ಮಗಳಾಗಿರಲಿ ಈ ಜೋಳದ ಕಾಳು ನೀನು ತೆಗೆದುಕೋ ರುಮಾಲಿನ ತುದೀಲಿ ಕಟ್ಟಿಗೋ. ಹುಂ ಹಿಡಿ! ಹೆಣ್ಣು ಇಲ್ಲಿರಲಿ ಇಲ್ಲಿ ಹೋಗಪ್ಪ ಇನ್ನು!'

ಬಡ ಹುಡುಗನು ಹೊರಟುಬಿಟ್ಟನು. ಆದರ, ಎಲ್ಲಿಗ ಹೋಗಬೇಕು? ಊರೇ ಇಲ್ಲದವನಿಗೆ ಕಾಲೂರಿದ್ದೇ ಊರು, ಕೈ ಊರಿದ್ದೇ ನೆಲ, ಮನಸ್ಸು ಊರಿದ್ದೇ ಮನ! ಈಗ ಎಲ್ಲಿಗೆ ಹೋಗೋಣ ಎಂದು ನಿಂತುಬಿಟ್ಟಿದ್ದನು.

ಆಗ ಆ ಬೆಳ್ಳೀ ಹೆಣ್ಣು ಕೇಳಿದಳು: 'ಏನ್ರೀ ಕೈ ಹಿಡಿದವರೇ! ನಿಮ್ಮ ಮುತ್ತಿನ ಜೋಳ ಎಲ್ಲಿ ನೆಡುತ್ತೀರಿ? ನನ್ನ ಹೊಸ ತಂದೆಯವರ ಹೊಲದಲ್ಲಿ ನೆಡರಿ. ಹೂ ಕಾಣರಿ. ಇಲ್ಲೇ ಮನಸ್ಸು ಊರಲಿ ನಿಮ್ಮದು!. ತಂದೆಯವರೆ, ಆಗಬಾರದೇನ್ರಿ?'

ಆಗ ಆ ಭಾರಿ ರೈತನಿಗೆ ಮನಸ್ಸು ಕರಗಿಬಿಟ್ಟಿತು. 'ಹೈದ, ಇದ್ದು

ಬಿಡು ಈ ಹೆಣ್ಣ್ಣ ನಿನಗೇ ಕೊಡುತೇನೆ ಒಳ್ಳೇ ಬೆಳ್ಳೇ ಹೆಣ್ಣ್ಣ ಕಣ್ಲೊ !'

ಆಗ ಆ ಬಡ ಹುಡುಗ ನಗುತ್ತ ಕೇಳಿದನು. 'ಹುಡಿಗಿ ಸರಿ ! ಆ ಮುತ್ತಿನ ಜೋಳ? ಅದೂ ನನಗೇನೇ ? '

ಆ ಕ್ಷಣ ಆ ರೈತ, ಆ ಹುಡಿಗೆ ಎಲ್ಲರೂ ನಗುತ್ತ ಕೂಗಿಬಿಟ್ಟರು: 'ಹೌದು ಮತ್ತೆ ! ಗೊತ್ತಾಯಿತೇ ಈಗ ! '

ಆ ಬಡ ಹುಡುಗ ಅಲ್ಲಿ ನಿಂತು, ಆ ಹೆಣ್ಣನ್ನು ಮದುವೆಯಾಗಿ, ಆ ಜೋಳ ನೆಟ್ಟುಬಿಟ್ಟ ಚೀಲ ತುಂಬಿ, ಚೆಲ್ಲಾಡಿಹೋಯಿತು ಮುತ್ತಿ ನಂಥ ಜೋಳದ ಕಾಳೆಲ್ಲ ! ಮೂರನೇ ವರ್ಷ, ಅದರ ಮೂರನೇ ವರ್ಷ ಅದರ ಮೂರನೇ ವರ್ಷ ಬೆಳೆ ಬೆಳೆದು ಊರ ಕಣಜವೆಲ್ಲ ತುಂಬಿಹೋಯ್ತು.

ಬಡ ಹುಡುಗನು ಅವನ ಬಡ ತಾಯಿಯನ್ನು ನೆನೆದು ವರ್ಷವರ್ಷವೂ ಬಡವರನ್ನೆಲ್ಲ ಕರೆದು ಕರೆದು 'ಜೋಳ ನೆಡಿರಪ್ಪ, ನೀವೂ ನೆಡಿರಪ್ಪ ! ' ಎಂದು ಹೇಳಿ ಭಿಕ್ಷ ಹಾಕುತ್ತಲಿದ್ದ. ಆ ಕಾಳುಗಳೆಲ್ಲವೂ—ಅಂಥವೇ ! ಆ ಬಡ ತಾಯಿ ಕೊಟ್ಟಿದ್ದಂಥ ಮುತ್ತಿನ ಕಾಳುಗಳೇ—'ನಡೂ ಹೊಲದಾಗೆ ನಡೂ ತೆನೇ ಮೋಗಣ ನೆತ್ತೀ ಕಾಳುಗಳೇ, ದಿಟ ! ' ಅನ್ನುರಿಂದ ಆ ಬಡ ಹುಡುಗನಿಗೆ ಆಗಲೂ, ಈಗಲೂ ಕೂಡ, ಜೋಳವೇ ಹಿಗ್ಗು. ಮತ್ತೂ ಇನ್ನೇನೂ......

ಹುಂಜನಿಗಿಂತ ಬೆಕ್ಕು ಹೆಚ್ಚು
ಬೆಕ್ಕಿಗಿಂತ ನಾಯಿ ಹೆಚ್ಚು
ನಾಯಿಗಿಂತ ಗೂಳಿ ಹೆಚ್ಚು
ಗೂಳಿಗಿಂತ ಹೆಣ್ಣು ಹೆಚ್ಚು
ಹೆಣ್ಣಿಗಿಂತ ಜೋಳ ಹೆಚ್ಚು—ಜೋಳವೇ ಹೆಚ್ಚು !

ಮತ್ತೆ ಆದ್ದರಿಂದ ಬಡ ಹುಡುಗನ ತಾಯಿ ಕಡೆಯ ಉಸುರಲ್ಲಿ ಹೇಳಿದ್ದು ಸರಿ ತಾನೆ? 'ನೋಡು ಮಗ ! ನಮಗೆಲ್ಲ ಜೋಳವೇ ಹಿಗ್ಗು ಮಗ !'

——

## ಉಂಗುರ

ಪ್ಯಾರಿಸ್ ನಗರವು ಫ್ರಾನ್ಸಿನಲ್ಲಿದೆ. ಅಲ್ಲಿ ಹಿಂದೊಮ್ಮೆ ಗಂಡಹೆಂಡರಿದ್ದರಂತೆ. ಅವರ ಮನೆಯಲ್ಲಿ ನಡೆದ ಸಂಗತಿ ಇದು.

ಗಂಡನು ಚಿಕ್ಕಂದಿನಿಂದ ಕಳ್ಳತನದಲ್ಲಿ ಜೀವಿಸಿಕೊಂಡಿದ್ದನು. ಹೆಂಡತಿಯಾಗಿದ್ದವಳು ಏನೇನೂ ಕಡಿಮೆಯಾಗಿರಲಿಲ್ಲ. ಓಡಿಯಾಡುವ ಜನರ ಜೇಬನ್ನೇ ಅವನು ಕತ್ತರಿಸಿದರೆ, ಆಕೆಯು 'ಷೇಕ್‌ಹ್ಯಾಂಡ್' ಮಾಡಿದವರ 'ಸೆಲ್ಯೂಟ್' ಮಾಡಿದವರ ಪದಾರ್ಥಗಳನ್ನೇ ಹಾರಿಸಿಬಿಡುತ್ತಿದ್ದಳು.

ಒಂದು ಬಾರಿ ಅವನು ಇವಳ ಕತ್ತು ಹಿಚುಕಿ ಕೊರಳ ಪದಕವನ್ನು ಕದ್ದುಬಿಟ್ಟ. ಕೂಡಲೇ ಪೋಲೀಸಿನವರ ಕೈಗೆ ಸಿಕ್ಕಿ ಕೋರ್ಟಿಗೆ ಹೋದನು. ಅವಳು ತನ್ನ ಕಸುಬಿನವನೇ ಅವನೆಂದು ಅರಿತು ಖುಲಾಸೆ ಮಾಡಿಸಿಬಿಟ್ಟಳು.

ಈ ದಯೆಯೇ ಪ್ರೀತಿಗೆ ಮೂಲವಾಗಿ ಇಬ್ಬರೂ ಮದುವೆಯಾದರು. ಚರ್ಚಿನಲ್ಲಿ ಮದುವೆ ಆಗುವಾಗ್ಗೆ ಇಬ್ಬರೂ ಶಪಥ ಮಾಡಿದರು. ಇಬ್ಬರೂ ತಮ್ಮ ತಮ್ಮ ತಪ್ಪು ಒಪ್ಪಿಕೊಂಡರು. ತಪ್ಪೇನೆಂದು ತಮಗೆಲ್ಲಾ ಗೊತ್ತಿದೆಯಷ್ಟೆ, ಇನ್ನು ಶಪಥವೇನೆಂದು ನಾನು ಹೇಳಬೇಕು.

"ಇನ್ನು ಮುಂದೆ ದಂಪತಿಗಳಾದ ನಾವಿಬ್ಬರೂ
ಸಭ್ಯಜೀವನದಲ್ಲಿ ಬದುಕುತ್ತೇವೆ. ನಮ್ಮ
ಸಂತಾನವು ದೇವರ ದಯೆಯಿಂದ ನಮ್ಮ
ಕೊರಮತನವನ್ನು ಪಡೆಯದೆಯೆ
ಒದುಕಿ ಬಾಳಲಿ!"

ಈ ಪ್ರಾರ್ಥನೆಯನ್ನು ದೇವರು ಕೇಳಿದನೋ ಇಲ್ಲವೊ ನಮಗೆ ತಿಳಿಯದು. ಅವರಿಬ್ಬರ ಶಪಥನಂತೂ ಸಾಗಿತು. ಕೊರಮ ಗಂಡ ಮತ್ತು ಕೊರಮ ಹೆಂಡತಿ ಅವರಿಬ್ಬರೂ ಕಷ್ಟಪಟ್ಟು ದುಡಿದು ಹಣ ಸಂಪಾದಿಸಿದರು. ಅವರ ಹಿಂದಿನ ಚರಿತ್ರೆಯನ್ನು ಪೋಲೀಸಿನವರೂ ಮರೆತರು; ನೆರೆಹೊರೆಯವರೂ ಸಹ ಮರೆತೇಬಿಟ್ಟರು

ಹೀಗೆ ತಿಂಗಳು ಕಳೆಯಿತು ವರ್ಷಗಳು ಉರುಳಿ ಹೋದವು ದೇವರೊಂದು ಬಾರಿ ಇವರ ಮೇಲೆ ಪ್ರೀತಿ ಇಟ್ಟಾಗ್ಗೆ, ಇವರ ಮನೆಯನ್ನು ಬೆಳಗಲು ಒಂದು ಪುಟ್ಟ ಕೂಸು ಹುಟ್ಟುವ ಸಮಯ ಒಂತು.

ಸೂಲಗಿತ್ತಿ ಬಂದಳು ರತ್ನದಂಥ ಗಂಡುಮಗುವನ್ನು ತಂದು ಮನೆಯ ಗಂಡಸಿನ ತೊಡೆಯ ಮೇಲಿರಿಸಿ ಹೋದಳು ಆತನು ಬಹಳ ಸಂತೋಷ ಒಟ್ಟ ಆ ಮಗುವಿಗೆ ಆಶೀರ್ವಾದ ಮಾಡಿ ತಾಯಿಯ ಮಡಲಿಗೆ ತುಂಬಿದನು.

ಒಂದು ವಾರವಾಯಿತು ಎರಡಾಯಿತು ವಾರ ಸರಿ, ಇನ್ನೇನು ಮಗುವನ್ನು ಚರ್ಚಿಗೆ ಒಯ್ದು ನಾಮಕರಣ ಮಾಡಬೇಕಾಗಿತ್ತು ಅದೇ ದಿನ ಮಗುವನ್ನು ತೊಳೆದು ಹೂಸಬಟ್ಟೆ ಹಾಕಬೇಕಾಗಿತ್ತು.

ಎಲ್ಲ ಸರಿ ಒಲು ಮುದ್ದು ಕೂಸು. ಆದರೆ ಅದೇಕೊ ಒಲ ಮುಷ್ಟಿ ಬಿಗಿ ಹಿಡಿದಿದೆ, ಬಿಡುವಲ್ಲದು. ತಾಯಿ ಏನೇನೂ ಮಾಡಿದಳು. ತಂದೆ ಏನೇನೊ ಮಾಡಿದನು ಬಿಡಲಿಲ್ಲ ಪುಟ್ಟಮುಷ್ಟಿ ಹೆಚ್ಚು ಒಲವಂತ ಮಾಡಿದರೆ ಎಳೆ ಬೆಗುರುಗ್ಳೆ ಏನಾದೀತೋ ಏನೋ ಎಂಬ ಭಯ

ಸಣ್ಣಪುಟ್ಟ ವೈದ್ಯರಿಗೆ ಸಗ್ಗಲಿಲ್ಲ. ಭಾರಿ ವೈದ್ಯನೊಬ್ಬನು ಬಂದು ನೋಡಿದನು. ಸರಿ, ಮಗುವಿನ ಕೈಬೆರಳೆಲ್ಲ ಅಂಟಿಹೋಗಿರಬಹುದೇನೋ. ಇರಲಿ ನೋಡಿಬಿಡುವ. ಹೀಗಂದು ಹರಿತವಾದ ಚಾಕು ತರಿಸಿದನು ಮಗುವನ್ನು ತನ್ನ ತೊಡೆಯ ಮೇಲಿಟ್ಟನು. ' ದೇವಗುರು, ಏಸು! ಇಂಥಾ ಸಣ್ಣ ಮಕ್ಕಳ ಮೇಲೆ ಚೂರಿ ಉಪಯೋಗಿಸಿರಲಿಲ್ಲ ನಾನು ' ಈಗ ಈ ಸಭ್ಯ ಗೃಹಸ್ಥರ ಮಗುವಿಗೆ ಯಾವ ತೊಂದರೆಯೂ ಆಗದಿರಲಿ ಈ ಮಗುವಿನ ಕೈಲಿ ಇನ್ನೇನು ಗುಟ್ಟು ಇದ್ದೀತೋ ನಾನು ನೋಡಬಯಸುತ್ತೇನೆ ಕ್ಷಮಿಸು ದೇವಗುರು, ಹೇ ಏಸು!' ಎಂದವನು ಚೂರಿಯನ್ನು ಬೆರಳ ತುದಿಗಳಿಗೆ ಮುಟ್ಟಿಸಿದನು. ಮಗುವಿಗೆ ಚುರುಕ್' ಎಂದಿರಬೇಕು!

' ಆಶ್ಚರ್ಯ! ಆಶ್ಚರ್ಯ ' ಮಗುವು ಬೆರಳು ಬಿಡಿಸಿದನು ಎಲೆ, ಮಳ್ಳ, ಏನಿದೆ ನಿನ್ನ ಕೈಲಿ! ಇದೆಲ್ಲಿಯ ಉಂಗುರ? ಎಂಥ ಮುದ್ದಾದ ಉಂಗುರ!' ಹೀಗೆಂದು ಆ ವೈದ್ಯನು ಅಚ್ಚರಿಬಟ್ಟನು ಎಲ್ಲರೂ ತಿಳಿದರು ' ಇದು ಮಹಾಮಹಿಮೆಯ ಮಗು. ದೇವಲೋಕದಿಂದ ಉಂಗುರ ತಂದಿದೆ.'

ಎಂದು ಊರೆಲ್ಲ ಗದ್ದಲ ನೋಡಹೋಗುವವರ ಪರಿಶೆಯೆ ಪ್ರಾರಂಭ ವಾಯಿತು.

ತಂದೆ ತಾಯಿಗಳಿಗೆ ನಂಬಿಕೆ ಬರಲಿಲ್ಲ ತಮ್ಮ ಪಾಪದ ಹಿಂದಿನ ಜೀವನದ ನೆನಪು ಬಂದಿತು ಇದು ದೇವರು ಕೊಟ್ಟ ಶಿಕ್ಷೆ. ದೇವರೆಂದೂ ಮರೆತಿಲ್ಲ ತಮ್ಮೀರ್ವರ ಕೂರಮಾತನವನ್ನು. ಹೀಗೆಂದುಕೊಂಡು ಯೋಚಿಸಿದರು

ಮಗುವಿನ ತಾಯಿಗೆ ನೆನಪು ಬಂತು, ಅದೇ ಉಂಗುರವು ಸೂಲಗಿತ್ತಿಯು ಕೈಬೆರಳಲ್ಲಿದ್ದಿರಬೇಕಲ್ಲವೇ? ಸೂಲಗಿತ್ತಿಯನ್ನು ಕರೆಸಿದರು ಮಗುವಿನ ತಾಯಿ ಅಕೆಯನ್ನು ಒಳಗೂಣೆಗೆ ಒಯ್ದಳು. ಕ್ಷಮಾಪಣೆ ಕೇಳಿದಳು. ಕಳೆದು ಹೋಗಿದ್ದ ಉಂಗುರವನ್ನು ಸೂಲಗಿತ್ತಿಯ ಕೈಲಿಟ್ಟಳು.

ಸೂಲಗಿತ್ತಿಯು ಕಳೆದುಹೋಗಿದ್ದ ಉಂಗುರವನ್ನು ಬೆರಳಿಗೆ ತೊಟ್ಟು ಕೊಂಡು 'ನಿಮಗೆ ಬಹಳ ವಂದನೆಗಳು ಕಳೆದು ಹೋಗಿದ್ದ ಈ ಉಂಗುರ ನಿಮಗೆಲ್ಲಿ ದೊರಕಿತು? ನಿಮ್ಮ ಮಗುವಿನ ಕೈಬೆರಳು ಈಗ ಹೇಗಿದೆ? ಹೇಳಿರಮ್ಮಾ!' ಎಂದಳು

ಹಳೇ ಕೊರಮಿತ್ತಿಯಾದ ತಾಯಿಯು ಅರ್ಧ ನಗುವಿನಲ್ಲಿ ಅರ್ಧ ಅಳುವಿನಲ್ಲಿ ಹೀಗೆ ಹೇಳಿದಳು 'ನನ್ನಾತನಿದ್ದನಲ್ಲ ಹಳೇ ಕೊರಮ, ಆತನ ಕೂಸಿದೆಯಲ್ಲ ಇದು, ಈ ಮುದ್ದು ಕೊರಮನ ಕೈಲಿತ್ತು, ಆ ನಿನ್ನ ಉಂಗುರ!'

ಸೂಲಗಿತ್ತಿ ಇನ್ನೇನೆಂದಾಳು. 'ಅಯ್ಯೋ, ಪುಟ್ಟ ಕೊರಮ! ಅದಾವಾಗ ಕಿತ್ತುಕೊಂಡೆ ನನ್ನ ಬೆರಳಿನಿಂದ, ಆ ಉಂಗುರಾನ!' ಹೀಗೆಂದು ಆ ಮಗುವಿಗೆ ಮತ್ತೊಂದು ಮುತ್ತಿಟ್ಟು ಹೊರಟುಹೋದಳು.

ಆ ರಾತ್ರಿ ಪ್ರಾರ್ಥನೆಯ ಸಮಯದಲ್ಲಿ ಗಂಡಹೆಂಡರಿಬ್ಬರೂ ಕೂಡಿ ಕಣ್ಣೀರಿಟ್ಟು ಹೇಳಿಕೊಂಡರು: 'ದೇವಗುರು, ಹೇ ಏಸು! ನಾವು ನಮ್ಮ ಶಪಥವನ್ನೇನೂ ಮುರಿದಿಲ್ಲ. ಆದರೆ ನೀನು ಮಾತ್ರ ನಮ್ಮ ಬೇಡಿಕೆಯನ್ನು ಕೇಳಲೇ ಇಲ್ಲ. ನಿನ್ನ ಚಿತ್ತ ಹೀಗೂ ಇತ್ತೆ? ಹೇ ತಂದೆ?'

---

## ನೆ ನ ಪು

ಮಾಚಯ್ಯ ಮನೆ ಬಿಚ್ಚಿಕೊಂಡಿದ್ದ. ಕೆಂಚು ಹೊಚ್ಚುತ್ತ ತಿರುವುತ್ತ
ಇದ್ದ. ಏನೊ ಚುಟುಕ್ ಎಂತು. ಸ್ವಲ್ಪ ಉರಿಯಿತು. ಹತ್ತಿರದಲ್ಲಿದ್ದ
ಹಗ್ಗದ ಚೂರು ಬಿಗಿದುಬಿಟ್ಟ. ಹೆಬ್ಬೆರಳನ್ನು ಹಾಗೇ ಕರೀ ಹಂಚಿನ ಮೇಲೆ
ಹಿಡಿಬಿಟ್ಟ. ಒಂದು ಒಪ್ಪಾರು ಮುಗಿಯಿತು. ಇನ್ನೊಂದು ಒಪ್ಪಾರಿಗೆ
ಇಳಿದು ಬಿಟ್ಟ. ಮಾತು, ಕತೆ, ಹಾಡು, ಸಿಳ್ಳೆಗಳಲ್ಲಿ, ಜೊತೆಯ ಜನದ ಸಂಗಡ
ಮನ ಮರೆತಂತೆ, ಮೈ ಸಹ ಮರೆಯಿತು. ಬೆರಳಿಗೆ ಕಟ್ಟಿದ ಹಗ್ಗ ಯಾವಾಗ
ಬಿಚ್ಚಿ ಹೋಯಿತೋ ಯಾರು ಬಲ್ಲರು. ಪುನಃ ಮುದ್ದೆ, ಎಸರು, ಚಟ್ನಿ,

ಮೊಸರು-ಅನ್ನಗಳಾದ ನಂತರ ತಂಬಾಕು, ಎಲೆ, ಗೋಟಡಿಕೆಗಳ ತೀಯಾಟ ದಲ್ಲಿ ಮನೆ ಬಿಚ್ಚಿ ಹೊಚ್ಚಿದ ಆಯಾಸ ಸಹ ಇರಲಿಲ್ಲ.

ಕರೀ ಮೋಡ ಬಂದು ನೀರೆಲ್ಲ ಸುರಿದು, ಬಿಳೀ ಮೋಡ ಒಂದು ಹೂವೆಲ್ಲ ಅರಳಿ, ಬಿಸಿಲೆಲ್ಲ ಬೆಳದಿಂಗಳಾಗಿ, ಪೈರೆಲ್ಲ ಬಾಗಿ, ಹಣ್ಣೆಲ್ಲ ಮಾಗಿ, ಮಾಚಯ್ಯನಿಗೆ ವಿರಾಮ ಬಂತು. ಹೊಲಕ್ಕೂ ಮನೆಗೂ ಲಾಳಿ ಹಾಕುವುದು ತಪ್ಪಿತು. ಮತ್ತೆ ಮನೆ ಬಿಚ್ಚಿಕೊಂಡ. ಈ ಕಡೆ ಮುಗಿಸಿ ಆ ಕಡೆಗೆ ಹೋಗಬೇಕು ಎನ್ನುವಾಗ ಬೇಂಗಟೆ ಹಂಚು ತಿರುವಿದ. ಅಲ್ಲಿ ನೋಡಿದರೆ ಒಂದು ಇಡೀ ಹಾವಿನ ಪೊರೆ ಸಿಕ್ಕಿತು. ಚೆನ್ನಾಗಿ ತೆಗೆದು ನೋಡಿದ, ಅದು ಪೊರೆಯಲ್ಲ ದೊಡ್ಡ ಹಾವಿನ ಮೈ. ಮೂಳೆ, ಮೋರೆ, ಪೊರೆ—ಸಕಲವೂ ಸಿಕ್ಕಿತು. ಆ ಕಳೇಬರವನ್ನು ಹಂಚಿನಲ್ಲಿ ಸುಡುರಿಸಿಟ್ಟು ತಂದ.

ಕಳಗಿಳಿದು ಬರುವಾಗ್ಗೆ ಗೆಳೆಯರೆಲ್ಲ ಒಂದರು ಒಬ್ಬರು ನೋಡಿ ಹೇಳಿದರು. 'ನಾಗರಹಾವಿನ ಕಳೇಬರವಾದರ ಒಳ್ಳೆಯದು. ನಾಗರ ಸಂಸ್ಕಾರ ಮಾಡಿದರ ಬಹಳ ಒಳ್ಳೆಯದಪ್ಪ!' ಇನ್ನೊಬ್ಬ ಹತ್ತಿರ ನಿಂತು ನೋಡಿ 'ಖಂಡಿತ ನಾಗರದ್ದೇ ಸರಿ ಈ ದೇಹ. ಮಾಚಯ್ಯಾ, ಮಾಡಿ ಬಿಡು ಸರ್ಪಸಂಸ್ಕಾರ!' ಎಂದ. ಪುಣ್ಯ ಬರುವದಿದ್ದರ ಅದೇಕ ಮಾಡಬಾರದೆಂದು ಮಾಚಯ್ಯನು ಗಂಧದ ಕಟ್ಟಿಗೆ ತರಿಸಿ ಆ ನಾಗರಹಾವಿನ ದೇಹವನ್ನು ಸುಡಿಸಿದನು. ತಂದೆಗಾದರ ಹೇಗೋ ಹಾಗೆ ಸೂತಕವಿದ್ದನು. ಕಡೆಯ ದಿನ ಶುಭಸ್ನಾನ ಮಾಡಿದನು. ಎಲ್ಲರಿಗೂ ಮಂಗಳ ಮೋಕ್ಷದ ಆರಾಧನ ಮಾಡಿಸುವ ದಿನ ಹಸೆಯ ಮೇಲೆ ಕುಳಿತಿದ್ದಾನ ಮಾಚಯ್ಯ. ಆತನ ಹೆಂಡತಿಯು ಇನ್ನೂ ಹಸೆಗ ಬಂದಿರಲಿಲ್ಲ; ಆಗ!

ಆಗಲೆ ಮಾಚಯ್ಯನ ಆಪ್ತನೊಬ್ಬನು 'ಏನಾ, ಮಾಚ! ಕಳೆದೊರ್ಸ ಈ ಹೊತ್ತು ಬೇಂಗಟೆ ಮೂಕ ಇದ್ದೆ, ಏನಲಾ?' ಇನ್ನೊಬ್ಬ ಗೆಳೆಯ 'ಬೆರಳಾಗ ಏನೋ ಹಗ್ಗ ಇತ್ತಪ್ಪ. ನಾನೇ ಅದನ್ನ ಕಿತ್ತೆಸ್ತೆ! ಅಲ್ಲೇನಲಾ?' ಎಂದು ಕೇಳಿದ. ಆಗ್ಗ ಮಾಚಯ್ಯ ಏನೋ ಯೋಚಿಸುತ್ತ ಕುಳಿತನು.

ಹಸೆಗೆ ಕರೆದ ಹಾಡು ಹೇಳಿದರು—

ಹೀರಾದ ಪೀರಕ್ಕ
ಬಾರೆ ಮಹಾಲಕ್ಷ್ಮಿ

## ಮಾಚಯ್ಯನಾಕೆ

‘ ನಾಚೀಕೆ ಯಾಕೆ ’

ಹೆಂಡತಿ ಬಂದು ಕುಳಿತಳು. ಆರತಿ ಎತ್ತಲಿಕ್ಕೆ ಬಂದಿದ್ದಳು, ಮಾಚಯ್ಯನ ತಂಗಿ; ಅವಳು ಕೇಳಿದಳು ‘ ಏನಾ! ಮಾಚು, ಹೆಬ್ಬೆಳ್ಳೇನಾ, ಕೆಂಪು ? ’

ಮಾಚಯ್ಯ ಏನೋ ಹೇಳುವ ಮೊದಲು, ಅವನ ಗೆಣೆಯರೆಲ್ಲ ಬಂದು ನಗೆಯಾಡಿ, ನೋಡಿದರು. ‘ ಓಹೋ ಇದೇ ಮಟಮಟ ಮಜ್ಜಾ ಕಣಾ, ಬೆಟ್ಟು ಬೇರೆ ಗಾಯಾ ಮಾಡಕೊಂಡಾ ! ಬಿಡು. ಹಾವೂ ಅದೇ ಕಣಾಲಾ ’ ಎಂದು ಒಬ್ಬನೆಂದು ಮಾಚಯ್ಯನನ್ನು ಭುಜ ಹಿಡಿದು ಅಲ್ಲಾಡಿಸಿದನು. ಇನ್ನೊಬ್ಬನೆಂದ ‘ ನನಗೇನೋ ತಿಳೀತು ಬಿಡು. ಅದೇ ನಾಗರಹಾವು. ಕೆಟ್ಟ ಜಾತು ಮಾಚಯ್ಯನ್ನ ಕೊಲ್ಲಬಂದು ತಾನೇ ಸತ್ತು, ಅವನ ಕೈಲೇ ಬೂದಿಯಾಯಿತು ಬಿಡು ’

ಹೀಗೆ ಇವರೆಲ್ಲ ಮಾತನಾಡುತ್ತಿರುವಾಗ, ಮಾಚಯ್ಯ ಎಲ್ಲವನ್ನೂ ನೆನಪು ಮಾಡಿಕೊಂಡನು—ಇದೇ ಸೋಮವಾರ ಸ್ನಾನ ಮಾಡಿ ಮುಡಿಪು ಕಟ್ಟುವ ದಿವಸ. ಅಂದಿನಿಂದ ಇಂದಿಗೆ ಇಷ್ಟು ದಿನವಾಗಿ ಹೋಯಿತು ಅದು ನಾಗರಹಾವೆಂದು ಅವನಿಗೆ ಇಂದು ತಿಳಿಯಿತು.

ಈ ವೇಳೆಗೆ ಗಾಯ ದೊಡ್ಡದಾಯಿತು. ಹೆಬ್ಬೆಟ್ಟು ಹಸುರಾಯಿತು. ಮಾಚಯ್ಯನ ಮುಖ ಬಿಳುಪೇರಿತು ಕೈಕಾಲು ಸ್ವಾಧೀನ ತಪ್ಪಿತು ಮಾತು ನಿಂತಿತು. ಡಾಕ್ಟರು ಬಂದು ನೋಡಿದರು ನಾಗರ ವಿಷದಿಂದ ಮಾಚಯ್ಯ ಮರಣ ಹೊಂದಿದ್ದನು.

ಹೋದ ವರ್ಷ ಸಾಯಬೇಕಾಗಿತ್ತು; ಸಾಯಲಿಲ್ಲ. ಆದರೆ ನಾಗರ ಹಾವಿನ ನೆನಪು ಬಂದು ಈ ವರ್ಷ ಸತ್ತೇಹೋದನು.

---

## ಅವಳಿ ಚಿಲುಮೆ

ದೇವರ ಹೆಸರು ಸಿದ್ದೇಶ್ವರ—ಸಂಪಿಗೇ ಸಿದ್ದೇಶ್ವರ! ಅದು ಇರುವ ಊರು ಚಿತ್ರದುರ್ಗ. ಊರಿಗೆ ದಕ್ಷಿಣ ದಿಕ್ಕಿನಲ್ಲಿ ಬೆಟ್ಟ, ಕೋಟೆ-ಬಾಗಿಲೆಲ್ಲ ದಾಟಿ ಹೋದರೆ ಸಂಪಿಗೇ ಸಿದ್ಧೇಶ್ವರನ ಗುಡಿ. ದೇವರು ಭಾರಿಯಾದ ಗುಹೆ ಯಲ್ಲಿದ್ದಾನೆ

ಮತ್ತಿ ತಿಮ್ಮಣ್ಣನಾಯಕನೇ ರಾಜನು. ಆತನು ಪೂಜೆ ಮಾಡುತ್ತಿ ರುವನು. ಪೂಜಾರಿಯು ಮಂಗಳಾರತಿ ಎತ್ತಿದನು. ಸಂಪಗೆ ಹೂಗಳೆಲ್ಲ ಬಲಭಾಗದಲ್ಲಿ ಉರುಳಿ ಬಿದ್ದವು. ಅರಸನ ಲಾವಣಿಕಾರನು ಕುಣಿದಾಡಿ ಜಯಗೀತೆ ಹಾಡಿಬಿಟ್ಟನು. ಸಂತೋಷಕ್ಕೆ ತಿಮ್ಮಣ್ಣ ಅರಸನ ಕಣ್ಣು ತುಂಬಿ ಬಂದಿತು.

ಗಾದಿರೆಮಲೆ ಎಂಬ ಕಾಡು-ಬೆಟ್ಟದಲ್ಲಿ ಹುಲಿಗಳು ಬಹಳವಾಗಿದ್ದವು. ಅಲ್ಲಿನ ಬೇಟೆಗಾರರಾದ ಭಿಲ್ಲರು ಬಂದು ಅಡ್ಡ ಬಿದ್ದರು. 'ಪರಾಕು ಜೀಯಾ!

ಪಟ್ಟೆ-ಹುಲಿಗಳ ಕಾಟ ತಡೆಯಲಾರೆವು. ಬೇಟೆಗೆ ದಯಮಾಡಿಸಬೇಕು-' ಎಂದು ಬೇಡಿಕೊಂಡರು. ತಿಮ್ಮಣ್ಣ ನಾಯ್ಕರು ಬೇಟೆಗೆ ಹೊರಟರು.

ಹುಲಿ, ಕರಡಿ, ಕಾಡಾನೆ, ಮೊಲ, ಜಿಂಕೆ ಹೀಗೆ ಇನ್ನೂ ಎಷ್ಟೋ ಪ್ರಾಣಿಗಳು ನೆಲಕ್ಕುರುಳಿದವು. ಎಲ್ಲರಿಗೂ ಹಸಿವು ಬಾಯಾರಿಕೆ. ಎಲ್ಲರೂ ಬುತ್ತಿ ತಿಂದರು ಚರ್ಮದ ಬುಡ್ಡಿಗಳಿಂದ ನೀರು ಕುಡಿದರು. ಕೆಲವರು ಹುಲಿಗಳ ಚರ್ಮ ಸುಲಿದರು; ಕೆಲವರು ಕರಡಿ-ಮರಿಗಳನ್ನು ಹಿಡಿದಾಡಿಸಿದರು; ಕೆಲವರು ಬೇಟೆಯಲ್ಲಿ ತೋರಿಸಿದ ಸಾಹಸಗಳನ್ನು ಹೊಗಳಿಕೊಂಡರು.

ಬೇಟೆ-ನಾಯಿಗಳು ಹಸಿ ಮಾಂಸ ತಿಂದು ನೀರಡಿಸಿದವು. ಎಲ್ಲಿಯೂ ನೀರು ಸಿಗದೆ ಬೆಟ್ಟದ ಕಿಬ್ಬಿಗಳಿಗೆಲ್ಲ ನುಗ್ಗಿದವು ಅಲ್ಲೆಲ್ಲೋ ಒಂದು ಕಡೆ ಕತ್ತಲು ಗುಹೆ. ಅದರೊಳಕ್ಕೆ ಬೇಟೆ-ನಾಯಿಗಳು ನುಗ್ಗಿದವು. ಗುಹೆಯಲ್ಲಿ ಎರಡು ಚಿಲುಮೆಗಳು ಎರಡು ನಾಯಿಗಳೂ ಬಾಯಿಟ್ಟವು. ಏನಾಯಿತೋ ಏನೋ ಚೀರಿಕೊಂಡು ಓಡಿ ಓಡಿ ಬಂದವು ತಿಮ್ಮಣ್ಣ ಅರಸರ ಕಾಲು ಬುಡದಲ್ಲಿ ಬಂದು ಬಿದ್ದು ಒದ್ದಾಡಿದವು

ಎರಡು ನಾಯಿಗಳಿಗೂ ಅರಸರೇ ಉಪಚರಿಸಿದರು, ನೀರಿಟ್ಟರು. ನಾಯಿಗಳು ನೀರು ಕುಡಿವಾಗ ತಿಮ್ಮಣ್ಣ ಅರಸರು ' ಚಿಮ್ಮ ಏಕಮ್ಮಾ! ಏನಾಯಿತಮ್ಮಾ. ಹುಲಿ ಹಿಡಿವವಳಿಗೆ ಅದೇನಮ್ಮ ಹೆದರಿಕೆ! ' ಎಂದು ಮೈ ತಡವರಿಸಿದರು ' ಚಿಗಿಯ! ನೀನೇಕೆ ಹೆದರಿದೆ? ಕುಡಿ ಕುಡಿ! ಈಗ ನೀರು, ಮನೆಯಲ್ಲಿ ಹಾಲು, ತುಪ್ಪ, ಏನು ಬೇಕಾದರದು! ' ಎಂದರು. ಮತ್ತೆ ಅವೆರಡು ನಾಯಿಗಳ ಮೋತಿಗಳನ್ನು ಒಟ್ಟಾಗಿ ಹಿಡಿದರು. ಆಶ್ಚರ್ಯ! ಮೋತಿಗಳೆರಡೂ ಬಂಗಾರ ಬೆಳ್ಳಿಗಳಾಗಿಬಿಟ್ಟಿವೆ! ಕಾರಣವೇನು? ಎಲ್ಲಿದ್ದೀತು ಈ ನೀರು? ಏನು ವಿಚಿತ್ರ!

ಭಿಲ್ಲರು, ಬಿಲ್ಲುಗಾರರು, ಗೆಳೆಯರು, ಎಲ್ಲರೂ ಬಂದು ನೆರೆದರು. ಎಲ್ಲರೂ ಆ ದಿಕ್ಕು ಈ ದಿಕ್ಕು ನುಗ್ಗಿ ಹೋಗಿ ಹುಡುಕಿದರು. ಏನೂ ಎಲ್ಲೂ ಸಿಗಲಿಲ್ಲ ಎಲ್ಲ ನೀರಲ್ಲೂ ಕೈಯಿಟ್ಟರು. ಎಲ್ಲ ನೀರನ್ನೂ ಕುಡಿದು ನೋಡಿದರು. ಎಲ್ಲರೂ ಅರ್ಧರಾತ್ರಿಯ ವೇಳೆಗೆ ಹಿಂತಿರುಗಿದರು.

ಅರಮನೆಯಲ್ಲಿ ಒಂದು ಕೋಣೆಯಲ್ಲಿ ಮಾತ್ರ ದೀಪ ಇದ್ದಕ್ಕಿದ್ದಂತೆಯೇ ದೊಡ್ಡದಾಯಿತು ಬಾಗಿಲು ತೆರೆಯಿತು. ಕಾವಲಿನವರೆಲ್ಲರೂ

ದಿಗ್ಗನೆ ಎದ್ದು ನಿಂತು ನೆಲ ಮುಟ್ಟಿ ಅಡಿಗೆರಗಿದರು. ದೊಡ್ಡ ಬಾಗಿಲು ತೆರೆಯಲು ಕೈಸನ್ನೆಯಾಯಿತು ಬೆಳಗಿನ ಜಾವದಲ್ಲಿ ತಿಮ್ಮಣ್ಣ ಅರಸರು ಮಡಿ ಉಟ್ಟು, ಹೂ-ತಟ್ಟೆ ಕೈಲಿ ಹಿಡಿದು ಹೊರಟರು. ಚಿಮ್ಮಿ ಮುಂದೆ ಹೊರಟಿತು ಚಿಗಿಯು ಹಿಂದೆಯೇ ಕಾವಲಾಗಿತ್ತು.

ಬೆಟ್ಟ ಗುಡ್ಡ ಹತ್ತಿದರು; ಕಣಿವೆ ಇಳಿದರು ಕಿಬ್ಬಿಯಲ್ಲಿ ಜಾರಿದರು. ಗುಹೆಯಲ್ಲಿ ಹಾರಿದರು. ಕಟ್ಟಕಡೆಗೆ ಒಂದು ಗುಹೆ ಎದುರಿಗೆ ಬಂದಿತು. ಒಳಗೆ ಎರಡು ಜ್ಯೋತಿಗಳು. ತಿಮ್ಮಣ್ಣ ಅರಸರು ಒಳಗೆ ನುಗ್ಗಿದರು. ಅತ್ತ ಬಿದ್ದರು. 'ಜೈ ಮತ್ತಿ ತಿಮ್ಮಣ್ಣನಾಯಕ ಜೈ ಜೈ!' ಜೈಕಾರದ ಸಂಗಡ ಶಂಖಗಳ 'ಭೋ ಭೋ ಭೊಂ' ಶಬ್ದಗಳು ಅದರೊಂದಿಗೆ ನಾಯಿಗಳು ಬೊಗಳಿದವು.

ತಿಮ್ಮಣ್ಣ ಅರಸರು ಕಣ್ಣುಬಿಟ್ಟರು. ಎದುರಲ್ಲಿ ಕಿನ್ನರರು ನಿಂತಿದ್ದರು. ಬೆಳ್ಳಿ ಬಂಗಾರದ ಪೈಗಳು, ಕಿರೀಟ ಕುಂಡಲಗಳನ್ನು ಧರಿಸಿದ್ದವರು. ನಕ್ಕರು, ನಲಿದರು, ಕುಣಿದರು. ಅರಸರು ಮುಂದೆ ನಡೆದರು. ತಟ್ಟೆಯಲ್ಲಿದ್ದ ಸಂಪಿಗೆ ಹೂಗಳನ್ನು ಎರಚಿದರು 'ಸಿದ್ದೇಶ್ವರ ನೀನೇ ನನಗೆ ತಂದೆ. ಎಲ್ಲಿಗೋ ಬರಬಾರದಲ್ಲಿಗೆ ಬಂದಿದ್ದೇನು. ಸರಿಯಾದ ದಾರಿ ತೋರಿಸು ತಂದೆ!' ಎಂದು ಕೈ ಜೋಡಿಸಿ ಬೇಡಿದರು.

ಕಿನ್ನರರು ಅರಸರ ಭಕ್ತಿಗೆ ಮೆಚ್ಚಿದರು. ಬೆಳ್ಳಿ ಬಂಗಾರದ ಚಿಲುಮೆಗಳನ್ನು ಚಿತ್ರದುರ್ಗದ ಅರಸರಿಗೆ ಧಾರೆ ಎರೆದು ಕೊಟ್ಟರು. ಅವುಗಳೆರಡೂ ಕುದಿಯುತ್ತಿದ್ದವು. ಒಂದು ಬೆಳ್ಳೀ ರಸ, ಇನ್ನೊಂದು ಬಂಗಾರದ ರಸ! ನಾಯಿಗಳೆರಡೂ ಬೆಳ್ಳಿ-ಬಂಗಾರದವುಗಳಾಗಿ ಗುಹೆಯಲ್ಲಿ ನಿಂತವು.

ಅರಸರು ಊರಿಗೆ ಬಂದರು. ಕಲ್ಲಿನಲ್ಲಿ ಎರಡು ನಾಯಿಗಳನ್ನು ಕೆತ್ತಿಸಿದರು. ನಿತ್ಯ ಬೆಳಗಿನ ಜಾವ ಎದ್ದು ಹೋಗಿ ಬೆಳ್ಳಿ ಬಂಗಾರದ ಸಂಪಗೆ ಹೂಗಳನ್ನು ತರುತ್ತಿದ್ದರು. ಐಶ್ವರ್ಯ ಕೂಡಿತು. ಸೈನ್ಯ ಹೆಚ್ಚಿತು. ಕೋಟೆ ಭದ್ರವಾಯಿತು. ಊರು ಬೆಳೆಯಿತು ಕೀರ್ತಿ ಹಬ್ಬಿತು. ಮತ್ತಿ ತಿಮ್ಮಣ್ಣ ಅರಸರಿಗೆ ಜೈ ಜೈ!

---

# ಗೌರಿಯ ಬರೆಹ

ಬರೆಯುವ ಕಡ್ಡಿ ಹೊರಗೆ ಬಂತು ಗೌರೀ ಕೈಗೆ ಹೋಯಿತು. ಮಸಿಯ ಕುಡಿಕೆ ಬಾಯಿ ತೆರೆಯಿತು ಕಾಗದ ಮಡಿಕೆ ಬಿಚ್ಚಿ ಸಿದ್ಧವಾಯಿತು. ಬತ್ತುವ ಕರಡು-ಕಾಗದ ಅಪಾಯ ಕಾಲಕ್ಕೆ ಸಿದ್ಧವಾಗಿತ್ತು. ಗೌರಾ ಮುಂದೆ ಸರಿಯಾಗಿ ಪದ್ಮಾಸನ ಹಾಕಿ ಕುಳಿತಳು ಸರಬರಲಿಲ್ಲ ಬೆಳಕು ಎಡಗಡೆಯಿಂದ ಬೀಳುವ ಹಾಗೆ ತೊಡೆಯ ಮೇಲೆ ಕಾಗದ, ರಟ್ಟು ಇಟ್ಟು ಕುಳಿತಳು. ದೀಪವನ್ನು ದೊಡ್ಡದು ಮಾಡಿಕೊಂಡಳು ಇನ್ನು ಬರಿಯಬೇಕು.

'ಮೀನಾಕ್ಷೀ, ಏ ಮಿನಾಕ್ಷೀ!'

'ಏನಮ್ಮ, ಗೌರಾ!'

'ಅಪ್ಪ!'

'ಹೂಂ! ಏನು?'

'ಯಾವಾಗ ಬರೋದು? ನಾಳೇನಾ?'

'ನಾಳೆ ಸಂಜೇಮ್ಮ. ದೀಪದ ಹೊತ್ತಿಗೆ.'

'ಸರಿ ಈಗ ಬರೆದು ಕಾಗದ ಕಳಿಸಿಬಿಟ್ಟರೆ ನಾಳೆ ಬೆಳಗ್ಗೆ ತಲುಪುತ್ತೆ. ನಾನು ಕೇಳಿದ್ದೆಲ್ಲ ತರಲೇಬೇಕು. ತರದೇ ಇದ್ದರೆ, ಗಂಗಮ್ಮನಾಗಿ ಬಿಡು ತ್ತೇನೆ.' ಎನ್ನುತ್ತ ಬರೆವಣಿಗೆ ಪ್ರಾರಂಭಿಸಿಬಿಟ್ಟಳು ಗೌರೀಕುಮಾರಿ

ಬರೆಯುವ ಕಡ್ಡಿ ಬಲಗೈಗೆ ಬಂತು. ಕುಡಿಕೇಲಿ ಅದ್ದಿಕೊಂಡಿತು. ಶಾಸ್ತ್ರೋಕ್ತವಾಗಿ ಬರೆಯುವುದಕ್ಕೆ ಪ್ರಾರಂಭವಾಡಿದರೆ 'ಶ್ರೀ'ಎಂಬೋದೇ

ಸರಿಯಾಗಿ ಬರೆಯುವಲ್ಲಗು ಆ ಲೇಖನಿ! ಅದಕೇನೋ ಸೊಕ್ಕು. ಅದ್ದಿದ ಮಸಿಯೆಲ್ಲ ಇಳಿದು ಇಳಿದು ಬೆರಳಿನ ನಡುವೆ ಸೇರಿಬಿಟ್ಟಿತು. ಕೈಚೌಕದಲ್ಲಿ ಒರಸಿಕೊಂಡಳು. ಕೈಬೆರಳು ಐದೂ ಮಸಿ. ದೀಪವನ್ನು ಕೆಳಗೆ ಇಳಿಸಿ ಕೊಂಡಳು. ರಟ್ಟು ಬಂತು ಜಮಖಾನದ ಮೇಲೆ. ಅದರ ಮೇಲೆ ಬಿಳೀ ಕಾಗದ. ಮತ್ತೆ ಪಕ್ಕದಲ್ಲಿ ಒತ್ತಿನ ಕಾಗದ ಹೀಗೆ ಎಲ್ಲ ಸಿದ್ಧವಾಗಿದ್ದವು.

ಬರೆಯುವ ಕಡ್ಡಿ ಬಲಗೈಗೆ ಬಂದು ಕಾದಿತ್ತು. ಎಡಗೈಗೆ ಮಸೀ ದೌತಿ ಬಂದು ಸಿದ್ಧವಾಯಿತು ಗೌರಿ ಅದ್ದಿ ಬರೆಯಹೋದಳು. ಮೇಲೆ ಒಂದು ಸಾಲು ಬರೆಯುವುದಕ್ಕೆ ಸಹ ತೊಂದರೆ ಕೊಟ್ಟರೆ ಇನ್ನೇನು ಮಾಡಿ ಯಾಳು ಪಾಪ!

ಸರಿ, ಬಲಾತ್ಕಾರವಾಗಿ ಮಾತು ಕಲಿಸಬೇಕಾಗಿತ್ತು ಆ ಕಾಗದಕ್ಕೆ ಗೌರಿಯ ಬಲಮುಷ್ಟಿಗೆ ಲೇಖನಿ ಬಂತು. ಎಡ ಅಂಗೈಯಿಗೆ ದೌತಿ ಬಂತು. ಲೇಖನಿ-ಕಡ್ಡಿಯ ಮೋತಿಗೆ ಇನ್ನಷ್ಟು ಮತ್ತಷ್ಟು ಅಳಲೇಕಾಯಿ-ಮಸಿ ಕುಡಿಸಿದಳು. ಒದರು ಒದರು ಒದರೂ ಎಂದು ಚೆನ್ನಾಗಿ ಒದರಿಸಿದಳು.

ನೋಡಿ, ಪುಟ್ಟ ಹುಡಿಗಿಯ ಮಾತು ಎಂದರೆ ಎಲ್ಲರಿಗೂ ಅಸಡ್ಡೆ. ಕಾಗದ ಏಳುವದಕ್ಕೆ ಹೋಯಿತು ಲೇಖನಿ ಚುಚ್ಚುವುದಕ್ಕೆ ನುಗ್ಗಿತು. ಮತ್ತೆ ಮಸಿಯಾದರೋ ಎಲ್ಲೆಲ್ಲೂ ಬೀಳಲಾರಂಭಿಸಿತು. ಮಸಿ ಹಳ್ಳ, ಮಸಿ ಹೊಳೆ!

ಗೌರಾ ಹಲ್ಲು ಮುಡಿಕಚ್ಚಿದಳು ಹುಬ್ಬು ಬಿಲ್ಲು ಮಾಡಿದಳು ಹಣೆ ನೆರಿಗೆ ಮಾಡಿದಳು. ಬಿಳೀ ಕಾಗದಕ್ಕೆ ಹಣೇಬರಹ ಬರೆದಳು. ಬರೆ ಹಾಕಿಸಿ ಕೊಂಡ ಬಸವನ ಹಾಗೆ ಅದು ಒದ್ದಾಡುವುದಕ್ಕೆ ಆರಂಭಿಸಿತ್ತು ಅಕ್ಷರ ಗಳು ಮೂಡಿದ ಮೇಲೆ ಒತ್ತುಗಳು ಬರುವುದಕ್ಕೆ, ಬಂದಂಥವು ಸರಿಯಾದ ಜಾಗಾಕ್ಕೆ ಹೋಗಿ ಸೇರುವುದಕ್ಕೆ ಸಹ, ಅವಕಾಶವಿರದಂತಾಗಿತ್ತು.

ಲೇಖನಿಯ ಮೇಲೆ ರೇಗಿದಳು ಗೌರಾ. ಪಾಪ ಅದೇನು ಮಾಡೀತು! ಅದು ಅಳುವುದಕ್ಕೆ ಆರಂಭಿಸಿತ್ತು. ಲೇಖನೀ-ಕಡ್ಡಿ ಅದುರಿತು, ಒದರಿತು, ಕಕ್ಕಿತು, ಕಾರಿತು, ಒಲ್ಲೆಂತು, ಇಲ್ಲೆಂತು; ಕಡೆಗೆ ಕೈಯಿಂದ ಕಳಚಿ ಕೊಡದೂ ಎಂದುಬಿಡುವ ಹಾಗೆ ಕೊಸರಾಡಿತು.

ಹಾಗುಂಟೆ ಎಲ್ಲಾದರೂ? ಎಂಟು ವರ್ಷದ ಪುಟ್ಟ ಹುಡಿಗಿಯೆಂದು

ಲೇಖನಿ, ಕಾಗದ, ಕುಪಿಕೆ ಸಹ ಹುಬ್ಬುಹಾರಿಸಿಬಿಟ್ಟರೆ ಇನ್ನೇನು ಗತಿ! ಗೌರಾ ರೇಗಿದಳು ಕಾಡಿಗೆ-ಕಣ್ಣು ಕೆಂಡವಾಯಿತು ತೊಂಡ-ತುಟಿ ರಕ್ತವಾಯಿತು ಬಿಡಲಿಲ್ಲ, ಬರೆದಳು. ಬಿಗಿದ ಮುಷ್ಟಿಯಲ್ಲಿ, ಬಲವಾಗಿ ಹಿಡಿದ ಲೇಖನಿಯಾದರೂ ಬಗೆದುಬಿಟ್ಟಿತು ಕಾಗದದ ಎದೆಯೆಲ್ಲ. ಊರಿದ ಮುಳ್ಳು ಚುಚ್ಚಿಕೊಂಡಿತು ಎಲ್ಲೆಲ್ಲೂ ಕಾಗದ ಹರಿಯುವ ಹಾಗ. ಅಂತು ಮುಗಿಯಿತು ಬರೆಹ.

ಲೇಖನಿ ಬಿಸಾಟಿ, ದೌತಿ ದೂರ ಇಟ್ಟು, ಓದುವುದಕ್ಕೆ ಆರಂಭಿಸಿದಳು.

— ಅಪಂಗೆ ಸಂಕಾರಗಳು —

— ತರೇಕು ಇವೆಲಾ —

ಇಲ್ಲಿ ಎಷ್ಟೋ ಒತ್ತುಗಳು ಹಾರಿಹೋಗಿದ್ದವು. 'ಅಮ್ಮಾ! ಮೀನಾಕ್ಷೀ! ಖಂಡಿತಾ ಎಂತ ಬರಿಬೇಕಾ?' ಎಂದು ಕೇಳಿದಳು ಅಮ್ಮ ಮೀನಾಕ್ಷಮ್ಮ ಏನೆಂದರೂ ಕಷ್ಟ. ಆದರೂ ನಗು ತಡೆದುಕೊಂಡು 'ನೋಡಮ್ಮ! ಇಷ್ಟೆಲ್ಲಾ ಬರೆದವಳಿಗೆ ಗೊತ್ತಾಗಲಿಲ್ಲವೆ?' ಎಂದು ಕೆಲಸಮಾಡುತ್ತಲೇ ಇದ್ದರು. ಗೌರಾ ಮತ್ತೆ ಒತ್ತಿ ಕೇಳಿದಳು 'ಮೀನಾಕ್ಷೀ! ಲೋಲಾಕು ಇಟ್ಟುಕೊಳ್ಳುವಿಯಾ ನೀನು?' ಅಮ್ಮ ಆಗಲೆಂದು ಹೇಳುವುದಕ್ಕೆ ಮುಂಚೆ ಗೌರಾ ಓದಲಾರಂಭಿಸಿದಳು

ನಂಗೊಂದು ಲೋಲಾಕು
ಅಮ್ಮಂಗೆ ಬುಲಾಕು
ಮುಗಿದಾಗ ಸರಕೀಟು
ತಂಬೇಕು ಬುಕೀಟು

ಮೀನಾಕ್ಷಮ್ಮನವರು ಹೇಳಿದರು: 'ಕಡೆಗೆ ನಮಸ್ಕಾರ ಬರಿಯಮ್ಮ. ಕ್ಷೇಮ ಬರಿಯಮ್ಮ ಮೇಲುಗಡೆ. ವಿಳಾಸ ಬರೆದಿಟ್ಟಿರುವ ಲಕೋಟೆ ಅಲ್ಲಿದೆ; ಅದರಲ್ಲಿಟ್ಟು, ಲಕ್ಕನ ಕೈಲಿ ಕೊಡಮ್ಮ.' ಅಮ್ಮನ ಮಾತು ಕೇಳಿಸಲಿಲ್ಲ ಗೌರಾ ಕುಮಾರಿಗೆ. ಕಷ್ಟಪಟ್ಟು ಬರೆದ ಕಾಗದ ಯಾರ ಕೈಲಾದರೂ ಹೋಗಿ ಬಿಟ್ಟರೆ ಗತಿ ಏನು? ಎಂದುಕೊಳ್ಳುತ್ತ ಮತ್ತೆ ಮತ್ತೆ ಓದಿ ನೋಡಿದಳು.

ಎಲ್ಲಾ ಅಕ್ಷರಗಳಿಗೂ ಒತ್ತುಗಳು ಎಲ್ಲೆಲ್ಲೋ ಹೋಗಿದ್ದವು. ತಲೆಕೊಟ್ಟು, ಇಳಿಸುಗಳೆಲ್ಲ ಹೇಗೆ ಹೇಗೋ ಆಗಿದ್ದವು. ಮತ್ತೆ ಬಗ್ಗಿ ಕುಳಿತು ಸರಿಮಾಡಿದಳು. ಎಲ್ಲ ಅಕ್ಷರಗಳಿಗೂ ಒತ್ತುಗಳು, ಸೊನ್ನೆಗಳು, ಸುಳಿಗಳು ಮೊದಲಾದ ಅಲಂಕಾರಗಳನ್ನೆಲ್ಲ ಸರಿಮಾಡಿದಳು. ಆದರೆ ಏನಾಗಿ ಹೋಗಿತ್ತು! ಕಾಗದವೆಲ್ಲ ಒದ್ದೆಯಾಗಿತ್ತು. ಅಕ್ಷರಗಳೆಲ್ಲವೂ ನೀರಲ್ಲಿ ಅದ್ದಿದ ಮಲ್ಲಿಗೆ-ಹೂಗಳಾಗಿದ್ದವು ಹಾಗೇ ಮಡಿಚಿ ಲಕೋಟೆಗೆ ಹಾಕಿದರೆ ಚಿತ್ರಾಗುತ್ತೆ. ಅಪ್ಪ ಓದುವುದು ಹೇಗೆ ?

ಸರಿ, ಕಾಗದವನ್ನು—ಅಂದರೆ ಒತ್ತುವ ಕಾಗದವನ್ನು—ಮೇಲಿಟ್ಟಳು ಅದು ಪಾಪ, ಎಷ್ಟು ಮಸಿ ಹೀರಿಕೊಂಡೀತು. ಅದು ಸಹ ಒದ್ದೆಯಾಯಿತು. ಅದನ್ನ ತೆಗೆದು ಹಾಕಿದಳು. ಇನ್ನೂ ಹಸಿಯಾಗಿತ್ತು ಕಾಗದ. ಗೋಡೆಗೆ ಒತ್ತಿದಳು. ಅದೂ ಸ್ವಲ್ಪ ಹೀರಿಕೊಂಡಿತು ಕಡೆಗೆ ಜಮಖಾನದ ಮೇಲೆ ಹಾಗೆ ಇಟ್ಟು ಬಾಯಿಂದ ಊದಿ ಆರಿಸುತ್ತ ಇದ್ದಳು. ಆರಿದ ಮೇಲೆ ಲಕೋಟೆಗೆ ಹಾಕಬೇಕು ಲಕ್ಕನ ಕೈಲಿಡಬೇಕು.

ಅಷ್ಟು ಹೊತ್ತಿಗೆ ಜಟಕಾ ಗಾಡಿಯ ಸದ್ದಾಯಿತು.

' ಗೌರಾ, ನಿಮ್ಮಪ್ಪ ಬಂದರೇನೊ, ನೋಡಮ್ಮ.'

' ಇದೇನೇ ಮೀನಾಕ್ಷೀ, ನನ್ನ ಕಾಗದ ಹೋಗಿಲ್ಲ ಇನ್ನೂ....'

' ಕಾಗದ ಇಲ್ಲೇ ಓದಿಕೋತಾರ ! ಎದ್ದು ಕಾಲಿಗೆ ನೀರು ಇಡು ಇಲ್ಲಿದೆ ಬಿಸಿ-ನೀರು. ದಣಿದು ಬಂದಿರುತ್ತಾರೆ. ಏಳಮ್ಮ ಏಳೇ. '

ಊರಿಗೆ ಹೋಗಿದ್ದ ಮನೆಯ ಯಜಮಾನ ಕುಮಾರಿಯ ಬೇಡಿಕೆಯ ಕಾಗದವು ತಲುಪುವುದಕ್ಕೆ ಮುಂಚೆ ಬರಬಹುದೆ? ಏನನ್ಯಾಯ! ಅಂತು ಚಿಂತೆ ಮಾಡುತ್ತ ಗೌರಾ ಎದ್ದು ನೀರು ಕೊಟ್ಟಳು. ಅಪ್ಪ ಒಳಗೆ ಹೋದ ಮೇಲೆ ಮತ್ತೆ ಬಂದು ಜಮಖಾನದ ಮೇಲೆ ಕುಳಿತುಬಿಟ್ಟಳು.

ತಿಂಡಿ-ತೀರ್ಥ ಆಗಿತ್ತು. ಮಾತು-ಕಥೆ ಮುಗಿದಿತ್ತು. ಅಪ್ಪ ಜಮಖಾನದ ಮೇಲೆ ಬಂದರು. ' ಏನಮ್ಮ ಗೌರಾ, ಕೈಯೆಲ್ಲ ಮಸಿ ! ಕಾಗದ ಬರೆದೆಯಾ? ಕೊಡಮ್ಮ ಅದೇನೇನಿದ್ದರೂ ತರೋಣಂತೆ ' ಎಂದೊಡನೆಯೇ ಗೌರಾಗೆ ಅಳು ಬಂದುಬಿಟ್ಟಿತು. ಕೈಯೆಲ್ಲ ಮಸಿ, ಬೆರಳೆಲ್ಲ ಮಸಿ, ಗಲ್ಲವೆಲ್ಲ ಮಸಿ ಬೊಟ್ಟು ಬೊಟ್ಟು, ಹಸೀ ಕಾಗದವೋ ಸ್ನಾನದ ಪಂಜೆಯಾಗಿತ್ತು—

'ಏನಮ್ಮ ! ಈ ಮಸೀಮಯ ! ಲೇ ! ಕಾಗದಾಸುರಮರ್ದಿನಿ, ಏನು ಬರೆ ದಿದ್ದೀಯೆ ? ಓದೋಣ ಕೊಡೆ ' ಎಂದು ತಂದೆಯು ಬೇಡಿದರೂ ಕೂಡ ಕೊಡಲಿಲ್ಲ

'ಏನೋ ಬರದೆ. ಅಮ್ಮನ್ನ ಕೇಳು. ನಾನು ಟಪಾಲಿಗೆ ಹಾಕಿಯೇ ಬಿಡತೇನೆ. ನೀನು ಬೇಕಾಗಿದ್ದರೆ ಅಲ್ಲೇ ಇದ್ದು ಓದಿಕೋಬೇಕಾಗಿತ್ತು.' ಎನ್ನುವಾಗ್ಗೆ ಎಂಟು ವರ್ಷದ ಗೌರಾನ ಕೊರಳು ಕೊಂಕಿತ್ತು. ಗಲ್ಲ ಊದಿತ್ತು, ಜಿಪುಣನಿಂದ ಬಾಯಿ ಬಿಗಿಸಿಕೊಂಡ ದುಡ್ಡಿನ ಚೀಲವಾಗಿತ್ತು. ಅಳು ಅಳಿಸಿ ಸಿಟ್ಟು ಬಂತು; ಸಿಟ್ಟು ಹಾರಿ ಅಳು ಬಂತು. ಕಾಗದ ಜೀನಾಟಿ ಕೋಣೆಗೆ ಹಾರಿ ಹೋಗಿಬಿಟ್ಟಳು.

ಗೌರಿಯ ಅಪ್ಪ ಬಿಚ್ಚಿದರು ಮುದುಡಿದ ಮಸಿಯ ಕಾಗದವನ್ನು. ಬರೆ ವಣಿಗೆಯಾಗಿರಲಿಲ್ಲ ಅದು, ಉತ್ತ ಹೊಲವಾಗಿತ್ತು. ಬಿತ್ತಿದ ಬೇಡಿಕ ಯಾಗಿತ್ತು. ಅಪ್ಪ ನೋಡಿ ನಕ್ಕುಬಿಟ್ಟರು 'ಏನೇ, ಏನಾ ! ಆ ಚೀಲ ತಾರೆ—ಈ ಊರಲ್ಲೇ ಇವೆಲ್ಲ ಇವೆ ಎಲ್ಲವನ್ನೂ ತಂದುಬಿಟ್ಟರಾಯಿತು ಬಿಡು !!' ಎಂದು ಆ ತಂದೆ ಪೇಟೆಗೆ ಹೋಗಿ ಬಂದರು

ಗೌರಾ ಬಿತ್ತಿದ ಅಕ್ಷರವೆಲ್ಲ ಮೊಳೆತು. ಮೊಳೆತು ಪೈರಾಯಿತು ಪಚ್ಚೆಯಾಯಿತು, ಫಸಲಾಯಿತು ! ಲೋಲಾಕ್ಕು, ಬುಲಾಕು, ಮುಲಕು, ಬುಕ್ಕಿ ಹೂವು—ಎಲ್ಲವನ್ನೂ ಧರಿಸಿ ಅಲಂಕಾರಿಯಾಗಿ ಅಪ್ಪನ ಮುಂದೆ ನಿಂತಳು. ಅಪ್ಪ ಹೇಳಿದರು—'ಹೋಗಮ್ಮ ದೇವರಿಗೆ ನಮಸ್ಕಾರ ಮಾಡಿ ಬಾ ! ಬಾಲಸುಬ್ರಹ್ಮಣ್ಯಾ ನಿನಗೇ ತೃಪ್ತಿ ! ಕಾಪಾಡಪ್ಪ ಕಾಪಾಡು !'

* * * * *

ಹತ್ತೇ ವರ್ಷಗಳು ಕಳೆದುಹೋದವು ಗೌರಾ ಭೈರವಿಯಾಗಿದ್ದು, ವನದೇವಿಯಾದಳು ವರದೇವಿಯಾದಳು ವರದೇವಿಯಾಗಿ ಗೃಹದೇವಿ ಯಾದಳು ಈಗ ಭೂದೇವಿಯಾಗಿದ್ದಾಳೆ. ಈ ದಿನ ತಪ್ಪು-ಹಜ್ಜೆಯ ತುಂಟಾರಿ ಗೌರಿಯ ಕುಮಾರನಿಗೆ ಹುಟ್ಟಿದ ಹಬ್ಬ ಬಲು ಸಂಭ್ರಮ

ರೋಷಾವೇಶದ ಕಾಗದ ಹೋಗಿತ್ತು ಅದರ ತುಂಬ ಆದರದ ಮಾತು ಇತ್ತು, ಆಗ್ರಹದ ಕರೆಯಿತ್ತು. ತಂದೆ-ತಾಯಿ ಬಂದರು. ಪೂಜೆ ಪುರಸ್ಕಾರಗಳು ಮುಗಿದವು ಗೌರಿಯ ಕುಮಾರನಿಗೆ ಮುದ್ದಾಟವಾಯಿತು.

ಗೌರಾ ಒಂದು ಅಪ್ಪ ಅಮ್ಮ ಇಬ್ಬರ ನಡುವೆ ಕುಳಿತಳು. ತೊಡೆಯಲ್ಲಿ ಪುಟ್ಟ ಕುಮಾರ, ಮಡಿಲಲ್ಲಿ ಮಲ್ಲಿಗೆ, ಮುಂದುಗಡೆ ಪಚ್ಚೆ-ತೆನೆ ಮತ್ತೆ ತಟ್ಟೆ ಯಲ್ಲಿ ಗುಲಾಬಿ. ಪಕ್ಕದಲ್ಲೇ ಸೀರಿನ ಗಿಂಡಿ, ಅದರಲ್ಲಿ ನಾರಿನ ಉಂಡ.

ಹೂವು ಕಟ್ಟುತ್ತ ಇದ್ದಾಳೆ ಗೌರಮ್ಮ. ಎಡಗೈಲಿ ದಾರ, ಬಲಗೈಲಿ ಗುಲಾಬಿಯ ದಳ. ಅಪ್ಪ ತೆಗೆದ ಕಾಗದವನ್ನ 'ಗೌರಾ, ನೀನೀಗ ಗೌರಮ್ಮನಾದುದಕ್ಕೆ ಸರಿಯಾಗಿ ಒಳ್ಳೇ ಚಿತ್ತಾರದ ಕಾಗದ ಬರೆದಿದ್ದಿ ಈ ದುಂಡು ಅಕ್ಷರ ಯಾರದ್ದಮ್ಮ? ಈ ಚಿತ್ತಾರ ಎಲ್ಲಿ?' ಎಂದು ಮುಗಿಸಲು ಮುನ್ನ ಗೌರಾ ಹೇಳಿದಳು. 'ಅವರೂ ರುಜು ಹಾಕಿದ್ದಾರೆ!' ಅಪ್ಪ ಒಪ್ಪಿದ 'ನಿಜ, ನೀನು ಬರೆದುದಕ್ಕೆ ಅವರು ರಾಜಿಯಾಗಿ ರುಜು ಹಾಕಿದರೆ? ಸರಿ! ಆದರೆ ನೋಡು ಗೌರಾ, ಆ ಕಾಗದ ಇತ್ತಲ್ಲ ಹತ್ತುವರ್ಷದ ಹಿಂದೆ ಬರೆ ದುದು, ಅದರಷ್ಟು ಫಲಕಾರಿಯಾಗಿಲ್ಲ ಇದು. ನಾವೇನೂ ಒಡವೆ ತಂದಿಲ್ಲ ಈಗ!' ಹೀಗೆಂದುದನ್ನು ಕೇಳಿ ಗೌರಾ ಪ್ರಶ್ನೆಮಾಡಿದಳು 'ಅಯ್ಯೋ! ಆ ಕಾಲವೆಲ್ಲಿ? ಈಗ ನಾನು ಹಾಗೆ ಮಾಡಿದರೆ ಆಗುತ್ತದೆಯೆ?'

ಅಪ್ಪ:– ಆಗದೆ ಏನು? ಅಂಥ ಕಾಗದ ಬರಿಯಬೇಕು.

ಗೌರಾ.– ಆ ಕಾಲ ಮರೀತು!

ಅಪ್ಪ:– ಇಲ್ಲಿ ನೋಡು ಆ ಕಾಗದ, ಇದನ್ನೂ ನೋಡು ಅದನ್ನೂ ನೋಡು!

ಗೌರಾ:– ಏನಪ್ಪ ಇದು! ಅವರೇನಾದರೂ ಬಂದಾರು! ಕೊಡಪ್ಪ ಇಲ್ಲಿ! ಯಾರಾದರೂ ಕಂಡಾರು!

ಇಷ್ಟು ಹೊತ್ತಿಗೆ ಪ್ರಾಯದ ಗೊಂಬೆ ಗೌರಾನ ಗಂಡ ಬಂದೇಬಿಟ್ಟನು ಗೌರಾ ಬೇಗನೆ ಅಪ್ಪನ ಬಾಯಿ ಮುಚ್ಚಿದಳು. ಕೈಲಿದ್ದ ಕಾಗದ ಕಿತ್ತು ಕೊಂಡಳು.

ಹೀಗೆ ತಂದೆಯ ಮೇಲೆ ಅತ್ಯಾಚಾರ ಮಾಡಿದರೆ ಯಾರಾದರೂ ಸುಮ್ಮನೆ ಇದ್ದಾರೇನು. ಅದರಲ್ಲೂ ಗೌರಾನ ಒಲವಿನ ಮೂರ್ತಿಯು ನಗರ ರಕ್ಷಕರ ಪಡೆಗೆ ಸೇರಿದ್ದವನು.

ಎಲ್ಲರ ಮುಂದೇ ತೀರ್ಮಾನವಾಯಿತು ಎರಡು ಕಾಗದಗಳನ್ನು

ಒಂದರ ಮಗ್ಗುಲಲ್ಲಿ ಒಂದಿಟ್ಟು ಕಟ್ಟುಹಾಕಿಸಿಡುವ ತೀರ್ಮಾನವಾಯಿತು. ಒಂದು ಉತ್ತಹೊಲ, ಇನ್ನೊಂದು ಚಿತ್ರದ ಮಣೆ. ಅಪ್ಪನ ಮನಸ್ಸಿಗೆ ಮಾತ್ರ ಹತ್ತುವರ್ಷದ ಹಿಂದೆ ಬರದ ಕಾಗದವೇ ಚೆನ್ನಾಗಿತ್ತು.

'ಏನೇ ಗೌರಾ, ಹೇಗೆ ಹಿಡಿಯುತ್ತ ಇದ್ದೆ ಆಗ ಲೇಖನಿಯನ್ನ? ಬೆರಳೇ ಎತ್ತು, ಲೇಖನಿಯೇ ನೇಗಿಲು, ಕಾಗದವೇ ಗದ್ದೆ, ಅಕ್ಷರವೇ ಬೀಜ, ಮತ್ತೆ ದೌತಿಯ ಮಸಿಯೇ ಯಾತದ ನೀರು—ಏನೇ ಅನ್ನು, ಆಗ ಅಕ್ಷರ ಬಿತ್ತಿದ ಹಾಗೆ, ಈಗ ಬಿತ್ತಲಾರೆ. ಈಗ ಮುತ್ತಿನ ಹಾಗೆ ಬರೆದರೂ ಕೂಡ, ಯಾರದ್ದೋ ರುಜು..' ಎನ್ನುವುದರಲ್ಲೇ ಗೌರಾ— 'ನೋಡು ಅಪ್ಪ! ಬೇಡಾಂದ್ರೆ! ಅಮ್ಮ ಅಮ್ಮಾ!' ಎಂದು ಅಪ್ಪನ ಬಾಯಿ ಕಟ್ಟಲು ಹೋದ ವಳು ತಲೆ ತಗ್ಗಿಸಿದಳು. ನಾರ ಕುಣಿಕೆ ಮಾಡಿದಳು, ಮಲ್ಲಿಗೆ ಇಟ್ಟಳು, ಮತ್ತೆ ಕುಣಿಕೆ ಮಾಡಿದಳು, ಪಚ್ಚೆ-ತೆನೆ ಬಿಗಿದಳು, ಮತ್ತೆ ಕುಣಿಕೆ ಮಾಡಿದಳು ಗುಲಾಬಿ ದಳಗಳನ್ನು ಸೇರಿಸಿದಳು.

ಸ್ವಲ್ಪ ಹೊತ್ತಿಗೆ, ನಾರೂ ಹೂವೂ ಸೇರಿ ಒಂದು ಹಾರವಾಗಿಬಿಟ್ಟಿತು. ಆ ಕ್ಷಣವೆ ಗೌರಿಯ ಗಂಡ ಅದನ್ನು ತೆಗೆದುಕೊಂಡು ಪುಟ್ಟ ಕುಮಾರ ನಿಗೆ ಹಾಕಿದ ಮತ್ತೆ ಅವನನ್ನು ಎತ್ತಿ ಗೌರಿಯ ಅಪ್ಪನ ತೊಡೆಯ ಮೇಲೆ ಕೂರಿಸಿದನು. ಎಲ್ಲರೂ ಸೇರಿ ನಕ್ಕಾಗ ನಗುವಿನ ಸಾಗರವಾಗಿಬಿಟ್ಟಿತು ಆ ಸಂಸಾರ.

ಅಪ್ಪ ಅಮ್ಮ ಹಿಂತಿರುಗಿ ಹೋಗುವಾಗ ಗೌರಾ ಬರೆದ ಆವೆರಡು ಕಾಗದಗಳನ್ನು ಉಡುಗರೆಯಾಗಿ ಒಯ್ದರು.

ಆ ವರ್ಷ ಗೌರಿಯ ಹಬ್ಬಕ್ಕೆ ಸುಣ್ಣ ಹಚ್ಚುವಾಗ್ಗೆ ಗೋಡೆಯಿಂದ ಹೊಪ್ಪಳೆ ಬಿತ್ತು. ನೋಡಿದರೆ ಅಲ್ಲಿ ಗೌರೀ ಬರಹದ ಮಸಿಯ ಮುದ್ರಿಕ ಇತ್ತು. ಮೀನಾಕ್ಷಮ್ಮನವರು ಆ ಮಸೀ ಶಾಸನದ ಸುತ್ತ ಚೌಕವಾಗಿ ಕಾರಣೆ ತೆಗೆದರು. ಅಲ್ಲಿ ಹೀಗೆ ಮಸುಕುಮಸುಕಾಗಿತ್ತು ಬರೆಹ—'ಉಗರ ಕಾಂಸ— ಗಂಸ ಅ—ಲಾವೆ ಇ—ಕುರೇತ,—ಕುಲಾಲೋ—ದುಂಗೋನ —ಕುಲಾಬು, ಗೆಂಮ್ಮ ಅ, — ಟುಕೀರಸ,—ಗದಾಗಿಮು, — ಟುಕೀಬ, ಕುಬೇರತ — — —. ರಾಗೌ—'

———

# ‘ಯದ್ಭದ್ರಂ’

ಶಂಕರಪ್ಪನವರಿಗೆ ಬೆಂಗಳೂರಿನಲ್ಲಿ ಕೆಲಸವಿತ್ತು. ಒಂದೇ ಒಂದು ವಾರ ಮಾತ್ರ ಅಲ್ಲಿ ಇದ್ದು ಹಿಂತಿರುಗಿ ಬರುವವರಾಗಿದ್ದರು ಮನೆಗೆಲ್ಲಾ ಉಳಿದವನೆಂದರೆ ಚಂದ್ರು—ಪುಟ್ಟ ಚಂದ್ರಶೇಖರ. ಅವನೇ ಯಜಮಾನ—ಏನಾದರೂ ತರಬೇಕಾದರೆ, ಅಥವ ತಿಳಿಸಬೇಕಾದರೆ ಕಾಗದ ಬರೆಯುವ ಹಕ್ಕು ಚಂದ್ರನಿಗೆ ಸೇರಿತ್ತು. ಮಸಿ, ಕಡ್ಡಿ, ಕಾಗದ, ಪೆಟ್ಟಿಗೆಯ ಬೀಗದ ಕೈ, ಮತ್ತು ಸ್ವಲ್ಪ ಚಿಲ್ಲರೆ ಹಣ ಸಹ ಅವನ ಕೈಲೇ ಇತ್ತು.

ಆದಿತ್ಯವಾರವೆಲ್ಲ ಯೋಚಿಸಿ ಯೋಚಿಸಿ ಸೋಮವಾರದ ದಿನ ತನ್ನ ಅಪ್ಪನಿಗೆ ಕಾಗದ ಬರೆದ.

ಅಪ್ಪಂಗೆ—

ಬೆಂಗಳೂರಲ್ಲಿ ಪೀಪಿ ಸಿಗುತ್ತಂತೆ ಸಿನಿಮ ಸಿಗುತ್ತಂತೆ ಚಲೋ ಪೀಪಿ ಬೇಕು ಸಿನಿಮ ಸಾಧಾರಣದ್ದೇ ಸಾಕು ಅಮ್ಮಗೆ ಅಡ್ಡಿಕೆ, ಕಾಸಿನ ಸರ ಇಲ್ಲ ಪತಿಭಕ್ತಿ ಬಳೆ ಬೇಕಂತೆ ಕೊಂಕುಳ ಶಂಖವಾದ ಪುಟ್ಟ ಶಾರೀಗೆ ಚೆನ್ನಪಟ್ಟಣದ ರಂಗಾಣ ಬೇಡವೆ? ಪೀಪಿ ಇಲ್ಲದಿದ್ದರೆ ರಾಗಮಾಲಿಕೆಯಾದರೂ ತನ್ನಿರಿ. ‘ಅವರ ಸಿದ್ರೆ ಕೆಡಿಸುತ್ತೀ, ಪೀಪಿ ಬೇಡ’ ಎನ್ನುವಳು ಅಮ್ಮ, ನಾನು ಊದುವದಿಲ್ಲ. ಅಪಾಯ

ಕಾಲಕ್ಕೆ ಮಾತ್ರ ಉಪಯೋಗಿಸಿಕೊಳ್ಳುತ್ತೇನೆ ಉಳಿದಂತೆ ಹಾಗೇ ಇರುತ್ತೆ; ತರು ತೀರಾ, ಎಲ್ಲಾ ಸಾಮಾನೂ? ರೈಲಿಗೆ ಎಂದು ಬರಲಿ?

—ಇಂತೀ ಚಂದ್ರು.

ಮಂಗಳವಾರ ಬೆಳಿಗ್ಗೆ ಶಂಕರಪ್ಪನವರ ಕಾಗದ ಬಂತು 'ಚಂದ್ರು ಮರೆತು ಬಿಟ್ಟನೆ ಹೇಗೆ? ಆದೇಕೆ ಕಾಗದ ಬರೆದಿಲ್ಲ?' ಎಂದು ಬರೆದಿದ್ದರು.

ಅದಕ್ಕೆ ಚಂದ್ರು ಕಾಗದ ಮರುಟಪಾಲಿಗೇ ಬರೆದುಬಿಟ್ಟ.

ಮನೆ ಹಜಾರ ಬುಧವಾರ

ಹಿರಿಯರಾದ ಅಪ್ಪನವರಿಗೆ—

ನಿಮ್ಮ ಕಾಗದವನ್ನು ಶ್ರೀ ಅಮ್ಮ ಓದಿ ಅರ್ಥಮಾಡಿ ಹೇಳಿದರು ಎಲ್ಲ ತಿಳಿಯಿತು ಈಗ ಅಮ್ಮನೇ ಮಸಿ ಅದ್ದಿ ಕೊಡುತ್ತ ಇದ್ದಾಳೆ ನಾನು ಬರಯೋನು. ಶಾರಿ ನೋಡುತ್ತ ಗಂಭೀರವಾಗಿ ಕೂತಿದೆ ನೆರಮನೆ ಸಿಂಗಮ್ಮನವರ ಮಗುವಿಗೆ ಉಡು ಗರೆಯಾಗಿ ಓದಿಸಲಿಕ್ಕೆ ನಡುವಿಗೆ ಹಾಕುವ ಬಂಗಾರದ ಎಳೆ ತರಬೇಕಂತೆ ಸೋಮ ವಾರದ ಕಾಗದದಲ್ಲಿ ಬರೆದದ್ದೆಲ್ಲ ತರಬೇಕಪ್ಪ ರಾಗಮಾಲಿಕೇನಾದರೂ ತರಬೇಕು ನಾನು ಸಿನಿಮಾ ಹಾಡು ಬಾರಿಸಬೇಕು ಕಾಗದ ಮಾತ್ರ ಸರಿಯಾಗಿ ಓದಿಕೋ ಎರಡು ಮೂರು ಸಾರೆಯಾದರೂ ಓದಿಕೊಳ್ಳಿರಿ.

—ನಮಸ್ಕಾರ
ಚಿಕ್ಕ ಚಂದ್ರು.

ಶುಕ್ರವಾರ ಚಂದ್ರು ಅಪ್ಪನವರ ಕಾಗದ ಬಂತು.

ಸೋಮವಾರದ ಕಾಗದಕ್ಕೆ ವಿಳಾಸವೇ ಸರಿಯಾಗಿರಲಿಲ್ಲ ಬುಧವಾರದ ಲಕೋ ಟೆಗೆ ಭಾರ ಹೆಚ್ಚಾಗಿತ್ತು ನನ್ನ ಕೈಯಿಂದ ಹಣ ಕೊಡಬೇಕಾಯಿತು ಚಂದ್ರೂ! ನೀನು ಬರೆದುದೆಲ್ಲವನ್ನೂ ತರುವುದೇ ಕಷ್ಟ. ತರದಿದ್ದರೆ ನಿಮಗೆಲ್ಲ ಎಷ್ಟು ಸಿಟ್ಟು ಬರುತ್ತದೋ ಕಾಣೆ. ಇಂತಿ ಆಶೀರ್ವಾದಗಳು.

—ಶಂಕರಪ್ಪ

ತೀರ್ಥರೂಪರವರಿಗೆ—

ಅಮ್ಮ ಈ ದಿನ ಪ್ರಾರ್ಥನೆ ಹೇಳಿಕೊಟ್ಟಳು. ಬೆಂಗಳೂರಲ್ಲಿ ಇರೋ ಅಪ್ಪನೇ ನಿನಗೆ ದೇವರು ಎಂತ ಅಮ್ಮ ಹೇಳಿದಳು ಹಾಗೆ ನೀನೇ ದೇವರೆಂದರೆ ನಿಮಗೆಲ್ಲ ತಿಳಿ ಯುತ್ತೆ ಅಲ್ಲವೆ, ನನಗೆ ಯಾವುದು ಒಳ್ಳೆಯದೆಂದು? ನಾನು ಕೇಳಿದ್ದೆಲ್ಲ ಅಲ್ಲಿ

ಸಿಕ್ಕುತ್ತೇ" ಎಂದು ಅಮ್ಮನ್ನ ಕೇಳಿದೆ ಅವಳು ಇಲ್ಲವೆನ್ನುತ್ತಾಳೆ. ಅದಕ್ಕೆ ಈಗ ಈ ಉಪಾಯ. ನನಗೆ, ಶಾರಿಗೆ, ಅಮ್ಮಗೆ ಮತ್ತು ನಿನಗು ಸಹ ಏನೇನು ಒಳ್ಳೆ ಒಳ್ಳೆಯದು ಸಿಗಬಹುದೋ, ಅವನ್ನೆಲ್ಲ ತೆಗೆದುಕೊಂಡು ಬನ್ನಿರಿ ನಮಗೆಲ್ಲ ಬೇಸರವಾಗಿದೆ. ಬೇಗ ಬಂದುಬಿಡಿ ಬೇಗ!

ಇಂತಿ ನಮಸ್ಕಾರ ಮಾಡುವ
ಚಂದ್ರು.

ಸೋಮವಾರವೇ ಅಪ್ಪನ ಕಾಗದ ಬಂತು ಚಂದ್ರು ಅಮ್ಮನಿಗೆ ಬರೆದಿದ್ದರು. ಈ ಬಾರಿಯ ಕಾಗದ ಚೆನ್ನಾಗಿತ್ತು.

ಮಂಗಳವಾರ ಬರುತ್ತೇನೆ. ಚಿಕ್ಕ ಚಂದ್ರನೇ ಟಪಾಲಾಫೀಸಿಗೆ ಬಂದಿದ್ದನೆಂದು ಇಲ್ಲಿಗೆ ಬಂದವರಾರೋ ಹೇಳಿದರು. ಚಿರಂಜೀವಿ ಚಂದ್ರೂ ಬರೆದ ಕಾಗದದಿಂದ ನಾನೂ ಸಹ ಒಂದು ಪಾಠ ಕಲಿತೆ. ನನ್ನ ನಿತ್ಯದ ಪ್ರಾರ್ಥನೆಗೆ ಇದೊಂದು ಸಂಸ್ಕೃತ ವಾಕ್ಯವನ್ನು ಸೇರಿಸಿಕೊಂಡಿದ್ದೇನೆ. ದೇವರೇ, ನನ್ನ ಪ್ರಾರ್ಥನೆಗೆ ಕಿವಿಗೊಡು! ಆದರೆ ಕಟ್ಟಕಡೆಗೆ 'ಯದ್ಭದ್ರಂ ತನ್ನ ಆಸುವ' — ಎಂದರೇ ಮಾತು ಚಂದ್ರು ಬರೆದ ಕನ್ನಡಕ್ಕೆ ವೇದದ ಮಾತು. ನನ್ನಪ್ಪ, ನನ್ನ ಜೀವನಕ್ಕೆ ಯಾವುದು ಒಳ್ಳೆಯದೊ ಅವನ್ನು ನನಗೆ ಕೊಡಿಸಿಕೊಡು ಈ ಪ್ರಾರ್ಥನೆಯು ಬಹಳ ಹಳೆಯದು, ಆದರೆ ಅದರ ಉಪಯೋಗವು ಮಾತ್ರ ಚಂದ್ರನು ಬರೆದ ಕಾಗದದಿಂದ ರಸವತ್ತಾದ ಅರ್ಥವನ್ನು ಕೊಟ್ಟಿದೆ. ಬೇಡಿಕೆಯ ತೂಕಕ್ಕೆ ಸಾಕಾಗುವಷ್ಟು ಬೆಲೆಯುಳ್ಳ ಭಕ್ತಿಯನ್ನು ಬೆರಸಿ ದೇವರಿಗೆ ಪ್ರಾರ್ಥಿಸಿದ್ದೇನೆ. ಆತನು ನನ್ನ ಮರೆತಿಲ್ಲ. ನಾನೂ ಸಹ ನಿಮ್ಮನ್ನು ಮರೆತಿಲ್ಲ. ಶ್ರುತವಿರಲಿ—

— ಶಂಕರಪ್ಪನ ಆಶೀರ್ವಾದಗಳು.

ಶಂಕರಪ್ಪನವರು ಮಂಗಳವಾರ ಬಂದರು ತಂದೆಯವರು ತಂದ ಸಾಮಾನುಗಳನ್ನು ನೋಡಿ ಚಂದ್ರನಿಗೆ ಕಣ್ಣುಗಳು ತುಂಬಿ ಹರಿದವು. ದೇವರ ಮನೆಗೆ ಹೋಗಿ ದೇವರಿಗೆ ಅಡ್ಡ ಬಿದ್ದನು ನಂದಾದೀಪವನ್ನು ದೊಡ್ಡದು ಮಾಡಿದನು. 'ನನ್ನ ತಂದೆಯವರಿಗೆ ಸದಾ ಒಳ್ಳೆಯದನ್ನೇ ನಡೆಸಿಕೊಡು ದೇವರೇ!' ಎಂದು ಬೇಡುತ್ತಿದ್ದನು. ಮರೆಯಲ್ಲಿ ನಿಂತು ಕೇಳುತ್ತ ಶಂಕರಪ್ಪನವರು ಹೀಗೆ ಬೇಡಿದರು: 'ಚಿಕ್ಕ ಚಂದ್ರನಂಥ ಕಿರಿಯವರು ನಮ್ಮ ದೇಶದ ಮನೆಮನೆಯಲ್ಲೂ ಬೆಳೆದುಬರಲಿ, ದೇವರೆ!'

———

## ಅಭ್ಯಂಕು

ಶುಂಡಾಲಯ್ಯನವರು ಶೇಕದಾರರು. ಸರ್ಕೀಟು ಹೊರಟರು ಶುಂಡಾಲಯ್ಯ. ಯಾವೂರಂತೀರಿ? ಆ ಊರು ಔತುಕೂಳ್ಳೀಪುರ; ಔವ್ರತು ಕೊಳ್ಳೀ! ವಿಚಿತ್ರವಾದ ಹೆಸರು. ಏನು ಮಾಡೋಣ, ಹಿಂದಿನವರು ಇಟ್ಟ ಹೆಸರು. ಔತುಕೊಳ್ಳೀ!

ಔತುಕೊಳ್ಳೀಪುರಕ್ಕೆ ಶೇಕದಾರ್ ಶುಂಡಾಲಯ್ಯನವರು ಸರಕೀಟು ಹೊರಟರು. ಸರಿ, ಊರಿನವರು ಬಂದರು ಸಾಲಾಗಿ ನಿಂತರು. ಕೊಂಬಿ

ನವನು ಕೂಗು-ಸಲಾವುು ಕೊಟ್ಟ — ಕೊ-ಕೊ-ಕೋ-ಕೋ-ಯಿ ಯಿ-ಯೀ ! ಕಹಳೆಯುವರು ಜಾಗೀರು-ಸಲಾವು ಕೊಟ್ಟರು—ತ್ರೂ-ಧ್ರೂಂ ತ್ರೂಂ-ಧ್ರುಂ-ಧ್ರೂಂ! ಶಾನುಭೋಗರು ಸಿಂಬೇಹಣ್ಣು ಕೊಟ್ಟರು ಪಟೇಲರು ಹಾರಾ ಹಾಕಿದರು. ಹೆಣ್ಣು ಹುಡುಗಿಯರು ಆರತಿಯೆತ್ತಿದರು—

ಮುಂಗಡೆಯೊಳು ನಿಂದು
ಮಂಗಳವಾಗಲೆಂದು
ಶೃಂಗಾರಶೀಲಗೆ ಶುಂಡಾಲರಾಯುಗೆ....ಎಂದು ಆರತಿ

ಎತ್ತಿ ಸುಳಿಯುಂಡೆ ನಿವಾಳಿಸಿದರು. ತಳವಾರಯ್ಯ ಕಟ್ಟಿನ ಕಟ್ಟಿಗೆ ಹಿಡಿದು ಮುಂದೆ ಮುಂದೆ ನುಗ್ಗಿದ—'ಹೇ ! ಯಾರಲ್ಲಿ, ಹೋಳಾಗು ಹೋಳಾಗು!' ಎಂದು ಕೂಗುತ್ತ ದಾರಿ ಬಿಡಿಸುತ್ತ ಹೊರಟುಬಿಟ್ಟನು.

ಎಂಥಾ ಅನ್ಯಾಯ ಮಾಡಿಬಿಟ್ಟೆ! ಮುಖ್ಯವಾದುದೇ ಮರೆತು ಹೋಯಿತು. ಯಾವುದು ಅನ್ನುವಿರೋ? ಶೇಕದಾರ್ ಶುಂಡಾಲಯ್ಯನವರು ಹತ್ತಿಕೊಂಡು ಬಂದಿದ್ದ ಕುದುರೆ ಕೆಂಗುದುರೆ. ಹಣೆದಾಸು, ಚೌರಿ ಬಾಲ, ಒಳ್ಳೇ ಜಾತಿಯ ಹೆಣ್ಣು-ಪೈಗು. ಗಿರ್ಜಾ ಮೀಸೆಯ ಶೇಕದಾರಿಗೆ ಪೈಗು-ಕುದುರೆ ಬೇಡವೆ ! ಊರೂರವರೆಲ್ಲ ನೋಡಿ ದಂಗಾಗಬೇಕೆಂದೂ, ಹಳೇ ಕಂದಾಯ ಬಾಕಿಯೆಲ್ಲ ಸುರಿದುಹೋಗಬೇಕೆಂದೂ ಅವರು ಹೀಗೆ ಪೈಗು ಏರಿ ಬಂದಿದ್ದರು.

ಔತುಕೊಳ್ಳುವರು ಮರ್ಯಾದೆ ಮಾಡಿದರು.

ಹಳ್ಳಿಯ ಸ್ಕೂಲಿನ ಮುಂದೆ ಹೈಕಳನ್ನೆಲ್ಲಾ ನಿಲ್ಲಿಸಿಕೊಂಡು ಮೇಷ್ಟ್ರಯ್ಯ ಪದ್ಯ ಹೇಳಿ ಪಟ ಒಪ್ಪಿಸಿದರು. ಶ್ರೀ ಔತೇಶ್ವರ ಗುಡಿಯ ಪೂಜಾರ್ರು ಮಂಗಳಾರುತಿ ತೋರಿಸಿ, ಶಡಗೋಪ ಇಟ್ಟು ಪ್ರಸಾದ ಕೊಟ್ಟರು. ಗಾಮದಲ್ಲೆಲ್ಲ ಪ್ರದಕ್ಷಿಣೆಯಾಯಿತು ಗುಡಿಯ ಉಯ್ಯಾಲೇ ಚೌಕಿಯಲ್ಲಿ ಔತೇಶ್ವರ ಕೂಟದಲ್ಲಿ ಚಕ್ಕ ಚೌಕವಾಗಿ ಚಕ್ಕಬಕ್ಕಳ ಕುಳಿತು ಶೇಕದಾರ್ರು ಭೋಜನ ಮಾಡಿಬಿಟ್ಟರು.

ನೋಡಿದಿರಾ, ಮತ್ತೆ ಅನ್ಯಾಯವಾಯಿತು ಆಗ ಕುದುರೆ ಮರೆತಿದ್ದೆ. ಈಗ ಇನ್ನೂ ಬಹು ಮುಖ್ಯವಾದ ಜವಾನ, ಅದರಲ್ಲೂ ದವಾಲೀ ಜಮೇದಾರ್ ಅಭ್ಯಂಕುವನ್ನೇ ಮರೆತುಬಿಟ್ಟೆ! ಗ್ರಾಮದಲ್ಲಿ ನಡೆದ ಮೆರವಣಿಗೆಯಲ್ಲಿ

ಬಂದ ಹಾರಗಳೆಲ್ಲ ಕಂದಾಸಿ ಪೈಗು ಪಡೆಯಿತು ಮತ್ತೆ ಕಾಯಿ, ನಿಂಬೇ ಹಣ್ಣು, ಖರ್ಜೂರ, ಬಾಳೇಹಣ್ಣು, ಅಡಿಕೆ ಎಲೆಗಳೆಲ್ಲ ಅಭ್ಯಂಕು ಪಡೆದನು. ಮೆರವಣಿಗೆ ಮುಗಿದ ನಂತರ ಎಷ್ಟೋ ಹೊಸಿಲ ದಾಟಿ ತೋರಣ ಅಲು ಗಾಡಿಸಿ, ಗಂಗಾಳ ಎಂಜಲು ಮಾಡಿ ಬಂದುಬಿಟ್ಟ ಈ ಮಹಾಬಂಟ ಅಭ್ಯಂಕು ಈಗ ಅಭ್ಯಂಕು ಪರಿಚಯವಾಯಿತೋ ತಮಗೆ?

ಸಂಜೆಗೆ ಶೇಕದಾರ್ ಶುಂಡಾಲಯ್ಯ ಊರ ಮುಂದಲ ಚಾವಡಿಯಲ್ಲಿ ತಂಗಬೇಕಾಯಿತು. ಊರ ಮುಂದೆ ಎಂದು ಹೆಸರು ಮಾತ್ರ. ಯಾಕೆಂದರೆ ಊರಿಗೆ ಚಾವಡಿಯು ಸುಮಾರು ದೂರದಲ್ಲಿತ್ತು. ಎರಡು ಕವಣೇ ದೂರ ಅಥವ ಮೂರೇ ಕವಣೆ ಇದಿರಬಹುದು ಅಂತು ಚಾವಡಿಯ ಸುತ್ತ ಕಾಡು ಒಂದು ಕಡೆ ಭಾಟಾಮಾರ್ಗ, ಇನ್ನೊಂದು ಕಡೆ ಸಣ್ಣ ಹಳ್ಳ. ಹಳ್ಳದಾಚೆ ಗುಡ್ಡಗಳು. ಚಾವಡಿಗೆ ಒಂದೇ ಕೋಣೆ; ಮತ್ತೆ ಅದರ ಸುತ್ತ ಹಜಾರ

ಮುಂಜೆ ಊಟ ಮಾಡಿ ನೀರು-ಸಿಡಿ ತೆಗೆದುಕೊಂಡು ಬಂದು ಶೇಕ ದಾರ್ರನ್ನ ಊರ ಮುಂದಣ ಚಾವಡಿಯಲ್ಲಿ ಸ್ಥಾಪಿಸಿ ಗ್ರಾಮರತ್ನಗಳೆಲ್ಲ ಹಿಂತಿರುಗಿದರು. ಇತ್ತ ದೂತರತ್ನನಾದ ಅಭ್ಯಂಕು ಮಹಾರಾಯನು---ಏನು ಮಾಡುತ್ತಲಿದ್ದಾನು?

ಅಭ್ಯಂಕು ಪೈಗು ಕಂದಾಸಿಗೆ ಮೈಯುಜ್ಜಿ ನಾಲೀಶು ಮಾಡಿ ರಂಗೋಲಿ ಚೌಕಳಿ ಹಾಕಿದ್ದನು ಗೂಟ ಹೊಡೆದು ಅಗಾಡಿ ಪಿಚಾಡಿ ಕಟ್ಟಿದ್ದನು. ಕೆತ್ತುಬಾರಿಯಲ್ಲಿ ಹುಲ್ಲು ಕೆತ್ತಿ ರಾಶಿ ಮಾಡಿದ್ದನು. ಹುರುಳಿ ಬೇಯಿಸಿ ತೋಪಡಕ್ಕೆ ಹಾಕಿ ಸಿದ್ಧಮಾಡಿದ್ದನು ಜೀನು ಪಾಲೀಸು ಮಾಡಿ, ರಿಕಾಪು ಉಜ್ಜಿ ಲಗಾಮಿಗ ಚರುಬಿ ತಿಕ್ಕಿ, ದವಡೆ-ಚಿಲುಕಗಳನ್ನೆಲ್ಲ ತಿಕ್ಕಿ ಧಳಧಳ ಮಾಡಿಬಿಟ್ಟಿದ್ದನು. ಇನ್ನೇನು ಕಲಸ? ರಾಯರು ಮಲಗಿದ ಕೂಡಲೆ ತಾನು ಕಾವಲಾಗಿ ನಾಯಿ-ನಿದ್ದೆ ಮಾಡುತ್ತ ಹಜಾರದಲ್ಲಿ ಇದ್ದುಬಿಡಬೇಕು.

ಇಷ್ಟಾದ ಮೇಲೆ ಇನ್ನೇನು?

ಶೇಕದಾರ್ ಶುಂಡಾಲಯ್ಯನವರು ಮಲಗಿದರು.

ದವಾಲೀ ಜಮಾದಾರ್ ಅಭ್ಯಂಕುಮಹಾರಾಯನು ಸಹ ಕುದುರೆಗೆ ಎದುರಾಗಿ ಸ್ವಲ್ಪ ದೂರದಲ್ಲಿ ಹಜಾರದಲ್ಲಿ ಒರಗಿಬಿಟ್ಟನು.

## — ಹನ್ನೆರಡು ಗಂಟೆ —

ಶುಂಡಾಲಯ್ಯ:– ಅಭ್ಯಂಕು ! ಅಭ್ಯಂಕೂ !

ಅಭ್ಯಂಕು.– ಮೂರನೇ ಬಾರಿ ಕೂಗಬೇಡಿ ಅಯ್ಯ, ಎದ್ದೆ.

ಶುಂಡಾಲಯ್ಯ:– ಎದ್ದು ಬರಬೇಡ. ಎಚ್ಚರಾಗಿದ್ದೀಯೊ ?

ಅಭ್ಯಂಕು:– ಎಚ್ಚರ ! ಚೆನ್ನಾಗಿಯೂ ಎಚ್ಚರವಾಗಿದ್ದೇನೆ !

ಶುಂಡಾಲಯ್ಯ:– ಕುದುರೆ ಜೋಕೆ ಎಂದೆ !

ಅಭ್ಯಂಕು:– ಕೆಂದಾಸೀ ಪೈಗೂ ! ಮೇಯೋದು ಬಿಟ್ಟು ನಿಂತಿದೆ ! ಕಲ್ಲೂ ನೀರೂ ಕರಗುವ ಸಮಯ ! ಗಂಧರ್ವರು ಭೂಮಿಗೆ ಇಳಿಯುವ ಹೊತ್ತು ನನ್ನೊಡೆಯ !

ಶುಂಡಾಲಯ್ಯ:– ಆಗಲಿ ಅಂತು ಎಚ್ಚರಾಪ್ಪ ಎಚ್ಚರ !

ಅಭ್ಯಂಕು ಹಾಗೇ ಎದ್ದು ಕುಳಿತು ಯೋಚನೆಗೆ ಪ್ರಾರಂಭಿಸಿದನು. 'ಹಳ್ಳ ಮೊದಲೋ, ತಿಟ್ಟು ಮೊದಲೋ ? ಮಳೆ ಮೊದಲೋ, ಹೊಳೆ ಮೊದಲೋ ? ಏನೇ ಆಗಲಿ ಆ ಬೆಟ್ಟಗಳನ್ನು ಕಟ್ಟಿ, ಕದಲದ ಹಾಗೆ ಕಲ್ಲಿಟ್ಟು, ಈಚೆ ಹೊಳೆ ಆಚೆಗೆ ಹರಿದುಹೋಗದಂತೆ ಮಾಡಿದವರು ಇದ್ದಾರಲ್ಲಾ !' ಎಂದು ಅಂಥ ಹಿರಿಯರ ಮಹಿಮೆಯನ್ನೇ ಹೊಗಳುತ್ತ ಕುಳಿತ.

## — ಒಂದು ಗಂಟೆ —

ಆ ಬೆಳದಿಂಗಳು ಅಷ್ಟು ಸುರಿದುಹೋದರೂ ಆ ಚಂದ್ರ ಬರಿದಾಗಲಿಲ್ಲ. ಈ ಮರಗಳು ಇಷ್ಟು ಎತ್ತರ ಹೋದರೂ ಕೂಡ ನಕ್ಷತ್ರ ಒಂದೂ ಸಿಕ್ಕಿ ಹಾಕಿಕೊಂಡಿಲ್ಲ, ಒಂದು ಕೊಂಬೆಗಾದರೂ ! ಇನ್ನು ಈ ನದೀ. . .

ಶುಂಡಾಲಯ್ಯ– ಅಭೀ. . ಅಭೀ. . ಅಭ್ಯಂಕಾ ! ಅಭ್ಯಂಕೂ !

ಅಭ್ಯಂಕು:– ಬುದ್ಧಿ ! ಏನಾ ?

ಶುಂಡಾಲಯ್ಯ:– ಕುದುರೆ ಮಲಗಿದೆಯೆ ?

ಅಭ್ಯಂಕು:– ಕುದುರೆಲ್ಲಾರೂ ಮಲಗೀತಾ, ನನ್ನಾಧಾ !

ಶುಂಡಾಲಯ್ಯ:– ಮತ್ತೆ ಇದೆ ಹೌದೋ ?

ಅಭ್ಯಂಕು:– ಚೆನ್ನಾಗಿಯೂ ಇದೆ ತೂಕಡಿಸುತ್ತ ನಿಂತಿದೆ ಅದೆಲ್ಲಾದರೂ ಮಲಗಿಬಿಟ್ಟರೆ ಪ್ರಳಯವಾದೀತು ವಿಭೋ !

ಶುಂಡಾಲಯ್ಯ:– ಅದೇನೋ. . ಅಂತು ನೋಡಿಕೊಳ್ಳಪ್ಪ !

ಅಭ್ಯಂಕು ಕುದುರೆ ನೋಡುತ್ತ ಕುಳಿತ ಮಹಾಲಕ್ಷ್ಮಿಯಂತೆ ಇತ್ತು ಅದು! ಎದ್ದು ಹೋಗೋಣವೆ ಎಂದುಕೊಂಡ. ಛೇ, ಎದುರಿಗೇ ಇರುವಾಗ್ಗ ಏಳಲೇಕೆ? ಏನೂ ಬೇಡವೆನ್ನಿಸಿತು ಹಾಗೇ ಯೋಚಿಸಿದ. ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳ ಮುಂತಾದ್ದೆಲ್ಲ ನಾನು ಮುಂದೆ ತಾನು ಮುಂದೆ ಎಂದು ಆತನ ಮನಸಿನ ಮುಂದೆ ಹೊಳೆದವು. ಅಂತೂ ಬಹಳ ಯೋಚನೆಯಲ್ಲಿ ಇದ್ದನು.

— ಎರಡು ಗಂಟೆ —

ಕೋಳಿ ಕೂಗಿತು—ಕೊ-ಕೊ-ಡ್ರೋಡಲ್-ಡೋಲ್! ಅಭ್ಯಂಕು ಹೊಸ ಯೋಚನೆಗೆ ಆರಂಭಿಸಿದನು ಕೋಳಿ ಮೊದಲೋ, ಮೊಟ್ಟೆ ಮೊದಲೋ?

ಆಗ ಶೇಕದಾರ್ ಶುಂಡಾಲಯ್ಯನವರು ಕನವರಿಸಿಕೊಂಡು ಎದ್ದರು.. 'ಲೇ! ಲೋ! ನಿಲ್ಲೋ..ಯಾರೋ ಅದು! ಹಿಡಿ! ಹಿಡೀ!' ಅವರಿಗೆ ಕುದುರೆ ಹೋದ ಕನಸು. ಶುಂಡಾಲಯ್ಯನವರ ಬಳಿಗೆ ಅಭ್ಯಂಕು ಓಡಿ ಹೋಗಿ 'ಏನಯ್ಯನವರೇ! ಕೂಗಿದಿರಾ? ಏನಾಯಿತು? ಯಾರು ಒಂದ ವರು ನಾನಿದ್ದಂತೆ ಇಲ್ಲಿಯೇ?'

ಶುಂಡಾಲಯ್ಯ:– ಯಾರೋ ತುಡುಗರೋ! ಕುದುರೆ ಒಯ್ದರಲ್ಲೋ!

ಅಭ್ಯಂಕು:– ಇಲ್ಲಯ್ಯಾ ನೋಡಿ, ಅಲ್ಲೇ ಇದೆ ಕುದುರೆ! ನಾನಂತೂ ಯೋಚಿಸುತ್ತಾ, ನಿದ್ದೆ ಓಡಿಸಿ ಕೂತಿದ್ದೇನೆ

ಶುಂಡಾಲಯ್ಯ:– ಏನು ಯೋಚಿಸಿದೆ?

ಅಭ್ಯಂಕು:– ಭಾರಿ ಯೋಚನೆ, ಎಲ್ಲಾ ಮಹಾ ಮಹಾ ಯೋಚನೆ! ದೇವರು, ಪ್ರಪಂಚ, ಬೆಟ್ಟ, ಹೊಳೆ, ಸುಖ, ದುಃಖ ಹೀಗೆ ಏನೇನೋ!

ಶುಂಡಾಲಯ್ಯ:– ಅಂತು ಕುದುರೆ ನೋಡಿಕೋಪ್ಪ. ಅದಕ್ಕೆ ಪೂರ್ತ ಹಣಾ ಸಹ ಕೊಟ್ಟಿಲ್ಲ ನೋಡು! ನಿದ್ದೆ ಮಾಡದೇ ಕಾದುಕೋ ನಿನ್ನದು ಆ ಕೆಂದಾಸೀ ಪೈಗು!

ಅಭ್ಯಂಕು ಮತ್ತೆ ಯೋಚಿಸುತ್ತ ಮಲಗಿದ. ಎದ್ದ! ಎದ್ದು ಕುಳಿತ ಎದ್ದು ತಿರುಗಾಡಿದ. ಮತ್ತೆ ಕುಳಿತ. ಮತ್ತೆ ಮಲಗಿದ.

## — ಮೂರು ಗಂಟೆ —

ಕೆಂದಾಸಿ ಹೂಂಕರಿಸಿತು. ಅಭ್ಯಂಕು ಅರ್ಧ ಒರಗಿ ಕುಳಿತನು. ಕೆರೆದು ಮತ್ತೆ ಹೂಂಕರಿಸಿತು. ಅಭ್ಯಂಕು ಹಾಗೇ ನೋಡಿದ. ಎಲ್ಲೋ ಹೋಗೆ ಬತ್ತಿಯ ಸೊಗಡು ಮೂಗಿಗೆ ಅಡರಿತು. ಎದುರಲ್ಲಿ ಹೊಳೆ ಹೊಳೆಯಾಚೆ ಗುಡ್ಡ ಗುಡ್ಡದ ನೆತ್ತಿಯಲ್ಲಿ ಚಂದ್ರ, ಹಚ್ಚಗಾಗುತ್ತ ಮುಳುಗುತ್ತಾ ಇದ್ದಾನೆ ಒಳ್ಳೇ ಸಮಯ ಅದು ಧ್ಯಾನಕ್ಕೆ! ಹಾಗೇ ನೋಡಿದ ಅಭ್ಯಂಕು. ಯಾರೋ ಇಬ್ಬರು ನೆರಳುನೆರಳಾಗಿ ಓಡಾಡಿದರು, ಹೊಳೆಯಿಂದ ಚಾವಡಿಗೆ, ಚಾವಡಿಯಿಂದ ಹೊಳೆಗೆ.

ಅಭ್ಯಂಕು ಹಾಗೇ ಕುಳಿತ ಯಾರಿರಬಹುದು ಇವರು ? ಊರವರೆ? ಕಾಡವರೆ? ಕಳವಿನವರೆ ? ಕಾವಲಿನವರೆ ? ಹಾಗೇ ಯೋಚಿಸುತ್ತ ಅವರನ್ನೇ ದಿಟ್ಟಿಸಿ ನೋಡುತ್ತ ಕುಳಿತುಬಿಟ್ಟನು. ಆಲೋಚನೆ ಬಹು ದೀರ್ಘವಾಗಿ ಹರಿಯಿತು ಕಳ್ಳರ ಮತ್ತು ಕಾವಲಿನವರ ರೀತಿ-ನೀತಿಗಳ ವಿಚಾರ, ಆಚಾರ, ವ್ಯವಹಾರ, ವಿಹಾರ, ಆಹಾರ ಹೀಗೇ ಹರಿದವು ಯೋಚನೆಗಳು ಅಲೆಯಲೆಗಳಾಗಿ

## — ನಾಲ್ಕು ಗಂಟೆ —

ಶೇಕದಾರ್ ಶುಂಡಾಲಯ್ಯನವರಿಗೆ ಗಾಢವಾದ ನಿದ್ದೆ ಹತ್ತಿದೆ ಗೊರಕೆ ಹೊಡೆಯುತ್ತಿದ್ದಾರೆ—ಗರ್, ಘುರ್, ಘುಮಾರ್, ಘುಂ. ಚಡಪಡಿಸುತ್ತಿದೆ ಕುದುರೆ ಹೂಂಕರಿಸುತ್ತ ಅಭ್ಯಂಕು ಮಹಾ ಮುನಿಯಾಗಿಬಿಟ್ಟಿದ್ದಾನೆ ಯೋಚಿಸಿ ಯೋಚಿಸಿ ಕುಳಿತು ಈ ಸಂದರ್ಭವು ಅಡ್ಡಾಡುತ್ತ ಇದ್ದ ಕಳ್ಳರಿಗೆ ಒಳ್ಳೆಯ ಸಮಯವಾಗಿದೆ. ಅವರು ಇಬ್ಬರೂ ಬಂದರು. ಚಾವಡಿಯ ಸುತ್ತ ತಿರುಗಿದರು.

ಅಭ್ಯಂಕು ಅಂದುಕೊಂಡನು: ‘ ಎಲಾ ಇವರ ! ಇದೇನು ಹೀಗೆ ತಿರುಗುತ್ತಾರೆ ! ತಿರುಗಲಿ, ತಿರುಗಲಿ ನನಗೇನಂತೆ ! ಎಷ್ಟು ಹಮ್ಮು ? ನಾನು ಕುಳಿತಿದ್ದರೂ ಕೂಡ ನೋಡದಲೆ ಮಾತನಾಡಿಸದಲೆ ತಿರುಗುವುದಕ್ಕೆ ಇವರಿಗೇನಂತೆ.’ ಹೀಗೆಂದುಕೊಂಡು ಈತನೂ ಸಹ ಸುಮ್ಮನೆ ಕುಳಿತುಬಿಟ್ಟ.

ಇಬ್ಬರು ಹೊಸಬರು ಬಂದು ಕುದುರೆಯ ಬಳಿ ನಿಂತರು. ಬಹಳ ಹೊತ್ತು ನಿಂತರು.

ಅಭ್ಯಂಕು ನೋಡುತ್ತ ಕುಳಿತ. 'ಕುದುರೆ ಕಚ್ಚುತ್ತೆ, ಕಚ್ಚಿಸಿ ಕೊಳ್ಳಲಿ. ಕುದುರೆ ಒದೆಯುತ್ತೆ, ಒದೆಯಿಸಿಕೊಳ್ಳಲಿ. ನನಗೇನು ! ಅದು ಮೊದಲೆ ಉದ್ದ ಕಾಲಿನ ಪ್ರೈಗು. ರೇಗಿದರೆ ಕಾಡುಕಿಚ್ಚು ನನಗೇನಂತೆ, ' ಎಂದು ಕುಳಿತುಬಿಟ್ಟ. 'ಶೇಕದಾರ್ರ ಕುದುರೆ ಒದ್ದರೆ ನೆನಪಿರುತ್ತೆ ವರ್ಷವೆಲ್ಲ ಅಲ್ಲವೆ ?' ಎನ್ನುತ್ತಲಿರುವಾಗ್ಗೆ ಇತ್ತ ಅವರಿಬ್ಬರು ಹೊಸಬರೂ ಸಹ ಕುದು ರೆಯ ಸಂಗಡ ಗೆಳೆತನ ಮಾಡಿಕೊಳ್ಳಲಾರಂಭಿಸಿದರು ಒಬ್ಬ ಹುಲ್ಲು ತಿನ್ನಿಸ ಲಾರಂಭಿಸಿದನು; ಇನ್ನೊಬ್ಬನು ಬೆನ್ನು ತಡವರಿಸಲಾರಂಭಿಸಿದನು.

ಅಭ್ಯಂಕು ಆಶ್ಚರ್ಯಪಟ್ಟನು. 'ಅಲ್ಲ ಇವರಿಗೇನು ತೆವಲು ! ನಾನು ಮಾಡುವ ಮಾಲೀಸು ಇವರೇಕೆ ಮಾಡಿಯಾರು ? ಮಾಡಲಿ ಬಿಡು ನನಗೇನಂತೆ. ನಾನು ಹೇಳಲಿಲ್ಲ ಮಾಡಿರಂದು. ಶೇಕದಾರ್ರಿಗೆ ದೂರು ಹೇಳಿದರೆ ನಾನು ಕೇಳುವುದೇ ಇಲ್ಲ.' ಹೀಗೆಲ್ಲ ಯೋಚಿಸುತ್ತ ಕುಳಿತಿ ದ್ದಾನೆ ನಮ್ಮ ಅಭ್ಯಂಕು

ಕಳ್ಳರಿಬ್ಬರೂ ಸಮಯ ಕಾದು ನಿಂತಿದ್ದರು.

— ಐದು ಗಂಟೆ —

ಒಬ್ಬನು ಕಾಲಿನ ಹಗ್ಗ ಬಿಚ್ಚಿ ಬಿಟ್ಟನು. ಇನ್ನೊಬ್ಬನು ಕೊರಳ ಹಗ್ಗ ಬಿಚ್ಚಿದನು.

ಅಭ್ಯಂಕು 'ಎಲಾ, ಇವರ! ಇದೇನು ಮಾಡಿದರು ಇವರು ! ಹುಡುಗಾಟವಾಯಿತಲ್ಲ ಇವರೇನು ಏಷಪರೀಕ್ಷೆ ಮಾಡುವರೇನು? ಜೀನಿಲ್ಲ, ಲಗಾಮಿಲ್ಲ, ಬೆತ್ತಲು-ಗುದುರೆ ಹತ್ತುವರೆ ಇವರು ? ಆಮೇಲೆ ಬಿದ್ದುಗಿದ್ದು ಹಲ್ಲು ಮುರಕೊಂಡಾರೋ ಹೇಗೆ! ' ಹೀಗೆಂದು ಎದ್ದು ನಿಂತು ಹೊದಿಕೆ ಕೆಳಗೆಸೆದು ಮುಂದೆ ಬಂದನು.

ಒಬ್ಬ ಕಳ್ಳ ಮೇಲೆ ಹಾರಿಕೊಂಡನು. ಕುದುರೆಯ ಕೊರಳ ಮೇಲಿನ ಕೂದಲೇ ಅವನ ಹಿಡಿತಕ್ಕೆ ಸಾಕಾಯಿತು. ಇನ್ನೊಬ್ಬನು ಕೈಲಿದ್ದ ಬರಳಲ್ಲಿ ಕುದುರೆಗೆ ಒಂದೇಟು ಕೊಟ್ಟನು.

ಲಕ್ಷ್ಮಿಯಂತೆ ಸಾಧುವಾಗಿದ್ದ ಕೆಂದಾಸಿಯು ಚಿಗರಿಯಂತೆ ಚಂಗನೆ ಜಿಗಿದು ನದಿಯ ಬಳಿಗೆ ಓಡಿತು. ನೀರು ದಾಟಿತು. ಆಚೆ ದಡದ ಮರಳಲ್ಲಿ ನೆರಳುನೆರಳಾಗಿ ಕಾಣಿಸುವಂತಾಯಿತು.

ಅಭ್ಯಂಕು ಇನ್ನು ತಡೆಯಲಾರದೆ ಹೋದ ಆದರೆ ರಾಯರನ್ನು ಬಿಟ್ಟು ಹೋಗಲಾರದಿದ್ದ. ಕುದುರೆಯನ್ನು ಚುಟಿಕೆ ಹೊಡೆದು ಕರೆದ, ಲಟಿಕ ಹೊಡೆದು ಕರೆದ ಅದೇನೋ ಎಂತೋ ಅಷ್ಟು ಹೊತ್ತಿಗೆ ಶೇಕದಾರ್ ಶುಂಡಾಲಯ್ಯನವರು ಎಚ್ಚತ್ತರು

ಶುಂಡಾಲಯ್ಯ:– ಅಭ್ಯಂಕು ! ಅಭ್ಯಂಕೂ !

ಅಭ್ಯಂಕು:– ಅಯ್ಯ ! ಕುದುರೆ ನೀವಾದರೂ ಕರೀರಿ ಬನ್ನಿ !

ಶುಂಡಾಲಯ್ಯ:– ಏನೋ ಹಾಗೆಂದರೆ ! ಎದ್ದು ಬಂದೆನಪ್ಪಾ!

ಅಭ್ಯಂಕು:– ಅಲ್ಲ ನೋಡಿ ಈ ಹಳ್ಳಿಯವರ ತುಂಟತನ! ನಡುರಾತ್ರೀಲಿ ಇಬ್ಬರು ಬಂದರು ಮನೆ ಸುತ್ತಿ ಹಾಕಿದರು

ಶುಂಡಾಲಯ್ಯ:– ಏನು ಮಾಡಿದೆಯಪ್ಪ ನೀನು! ಯಾರೂಂತ ಕೇಳಲೂ ಇಲ್ಲವೊ ?

ಅಭ್ಯಂಕು:– ನನಗೇನು ಬೇಕಿತ್ತು ನಮ್ಮಪ್ಪ! ಕೇಳಲಿಲ್ಲ ನಾನು. ಮತ್ತೆ ಕುದುರೇ ಹತ್ತಿರ ಬಂದು ನಿಂತರು

ಶುಂಡಾಲಯ್ಯ:–ಆನಂತರ ಏನು ಮಾಡಿದರಯ್ಯ? ಕುದುರೆ ಕ್ಷೇಮವಷ್ಟೆ?

ಅಭ್ಯಂಕು:– ಕುದುರೆ ಇನ್ನೆಲ್ಲಿ ಹೋಗುತ್ತೆ ?

ಶುಂಡಾಲಯ್ಯ:- ಕೆಂದಾಸೀ ! ಕೆಂದಾಸೀ ! ಎಲ್ಲಯ್ಯ ಕುದುರೆ ?

ಅಭ್ಯಂಕು:– ಹೇಳಿದೆನಲ್ಲ, ಬಿಚ್ಚಿದರೆಂದು ! ಅವರ ಧೈರ್ಯ ನೋಡಿ ! ಒಬ್ಬ ಮೇಲೆ ಹತ್ತಿದ ಇನ್ನೊಬ್ಬ......

ಶುಂಡಾಲಯ್ಯ:– ಇನ್ನೊಬ್ಬ ಅಟ್ಟಿಸಿ ಓಡಿಸಿಬಿಟ್ಟನೇನು ! ಅಯ್ಯೋ ನಿನ್ನ ! ಮೊದಲೇ ಏಕೋ ಹೇಳಲಿಲ್ಲ ! ಹಣ ಸಹ ಪೂರ್ತ ಕೊಟ್ಟಿಲ್ಲ ! ಹೋಯಿತೇ ಕುದುರೆ. .ಏನು ಹಾಳು ಊರಿಗೆ ಬಂದೆವಪ್ಪ. .

ಹೀಗೆಂದು ಶೇಕದಾರ್ರು ಹಾರಿಹೋದರು ಹೊಳೆಯಾಚೆಗೆ. ಅಭ್ಯಂಕು ಪ್ರಪಂಚದ ವ್ಯವಹಾರವನ್ನೆಲ್ಲ ಅರಿಯದವನಾಗಿ ಜಗುಲಿಯ ಮೇಲೆ ಹಾಗೇ ನಿಂತುಬಿಟ್ಟನು. ಅವನಿಗೆ ಎಲ್ಲವೂ ಆಶ್ಚರ್ಯಮಯ. ಒಂದು ಕುದುರೆ ಗಾಗಿ ಇಷ್ಟೆಲ್ಲ ಗದ್ದಲವೆ !

..........ಇಂಥವನು ಮಹಾಜಂಟನಾದ ಅಭ್ಯಂಕು ಮಹಾರಾಜ !

——

# ನಿಶ್ಚಲದಾಸ

ನಿಶ್ಚಲದಾಸನಿಗೆ ಕೂದಲೆಲ್ಲ ಫಲಕ್ಕೆ ಬಂದು ಬೆಳ್ಳಗಾಗಿತ್ತು. ಮಾಂಸ ವೆಲ್ಲ ಕರಗಿತ್ತು. ಚರ್ಮವೆಲ್ಲ ಸುಕ್ಕುಬಿದ್ದಿತ್ತು. ಆದರೆ ಹಲ್ಲುಗಳು ಮಾತ್ರ ಬಿಗಿಯಾಗಿದ್ದುವು; ಕಣ್ಣುಗಳಲ್ಲಿಯೂ ಸಹ ಹೊಳಪು ಹೆಚ್ಚಿದ್ದವು. ತರ್ಕ ಶಾಸ್ತ್ರ ಹೇಳಿ ಹೇಳಿ, ಪ್ರಪಂಚದ ಸಂಗಡ ವಾದ ಮಾಡಿ ಮಾಡಿ, ದವಡೆ ಗಟ್ಟಿಯಾಗಿತ್ತೋ ಏನೋ ನಾನು ಕಾಣೆ. ನೂರು ಜನ ಶಿಷ್ಯರಿಗೆ ಪಾಠ ಹೇಳಿ ತರ್ಕದಲ್ಲಿ ಬಾಯಿ ಮುಚ್ಚಿಸುವುದೇನು ಸಾಮಾನ್ಯವೆ? ಸಾಮಾನ್ಯ ವಲ್ಲ, ಸುಲಭವಲ್ಲ. ನಿಶ್ಚಲದಾಸನಿಗೆ ತರ್ಕವೆಂದರೆ ನಿರರ್ಗಳ.

ನಿಶ್ಚಲದಾಸನು ನಿರ್ಗುಣೋಪಾಸಕನು. ಆತನ ಶಿಷ್ಯರು ಯಾವಾಗ್ಯೂ ಮೈಮರೆತವರಲ್ಲ. ಸದಾ ಎಚ್ಚೆತ್ತು ಚರ್ಚೆಮಾಡಿ ಜನರ ಮನಸ್ಸಿನ ಮಾಂದ್ಯವನ್ನೂ ಮೋಹವನ್ನೂ ಕಳೆಸುವವರು. ಈ ದೇಹದಲ್ಲಿರುವ ಕಣ್ಣಿಗೆ ಕಾಣದಿರುವ ರೂಪವನ್ನು ನಿಶ್ಚಲನು ಪೂಜಿಸುವನು.

ತುಳಸೀದಾಸನು ಸಗುಣೋಪಾಸಕನು. ಶ್ರೀರಾಮನ ಭಕ್ತನು. ಆತನು ಸದಾ ಭಕ್ತಿಯಲ್ಲಿ ಮೈಮರೆತು ಮತ್ತನಾಗಿರುವವನು ಪ್ರಪಂಚವೇ ಆತನಿಗೆ ರಾಮರೂಪ. ಕೆಲಸಗಳೆಲ್ಲ ರಾಮಲೀಲೆ. ಆತನಿಗೆ ಅನುಮಾನಕ್ಕೆ ಅವಕಾಶವೇ ಇರಲಿಲ್ಲ ಭಕ್ತಿಯ ಫಲವಾದ ಆನಂದಕ್ಕೆ ಮೇರೆಯೇ ಇರಲಿಲ್ಲ ತುಳಸಿಯೂ ಮತ್ತು ಆತನ ಶಿಷ್ಯರೂ ಸಹ ಸದಾ ಭಜನೆಯಲ್ಲಿ ಆನಂದಪಡುತ್ತಿದ್ದರು

ನಿಶ್ಚಲನಿದ್ದಲ್ಲಿ ನಿಶ್ಶಬ್ದ. ತುಳಸಿಯಿದ್ದಲ್ಲಿ ಕೋಲಾಹಲ ನಿಶ್ಚಲನು ಇದ್ದಲ್ಲಿ ಗೌರವಯುತವಾದ ಚರ್ಚೆ, ಭಯ; ತುಳಸಿಯಿದ್ದಲ್ಲಿ ಗಂಗಾಲಹರಿಯಂತೆ ಆನಂದ, ನಿರ್ಭಯ ನಿಶ್ಚಲನ ಶಿಷ್ಯರು ಸಂಖ್ಯೆಯಲ್ಲಿ ಕಡಿಮೆಯಾಗುತ್ತ ಕರಗುತ್ತ ಬಂದರು. ತುಳಸಿಯ ಶಿಷ್ಯರು ಇಮ್ಮಡಿಸುತ್ತ ಹಿಗ್ಗುತ್ತ ನಿಂತರು.

ನಿತ್ಯ ನಿತ್ಯ ವರ್ತಮಾನ ಬರುತ್ತಲಿತ್ತು, ತುಳಸೀದಾಸರ ಪ್ರಭಾವಗಳದ್ದು ಅವತ್ತು ಅದು, ಇವತ್ತು ಇದು—ಏನೇನೂ ಸಾಮಾನಿಲ್ಲದೆ ಊಟ ಬಡಿಸಿದನಂತೆ! ಮೋಟುಗೋಡೆ ಮಾತಾಡಿಸಿದನಂತೆ! ಮೋಡವಿಲ್ಲದೆ ಮಳೆ ಬರಿಸಿದನಂತೆ! ನಾಸ್ತಿಕರನ್ನು ನಂಬಿಸಿದನಂತೆ! ಹೀಗೇ ನಿತ್ಯ ನಿತ್ಯ! ನಿರ್ಗುಣೋಪಾಸಕನಾದ ನಿಶ್ಚಲನಿಗೆ ಏನೊಂದೂ ತೋಚದಾಯಿತು.

ಒಂದು ದಿನವಂತೂ ಒಬ್ಬ ಶಿಷ್ಯನು ಪಾಠದ ಕಡೆಗೆ ಗಮನ ಕೊಡದಲೆ ಕೂತುಬಿಟ್ಟನು. ನಿಶ್ಚಲದಾಸ ಹೇಳಿದ: ‘ ಏನದು ನಿತಾಂತ, ಯಾತರ ಯೋಚನೆ ನಿನಗೆ ? ’ ಶಿಷ್ಯ ಸಿಟ್ಟಿನಲ್ಲಿ ಹೇಳಿದ: ‘ ನಮ್ಮ ಪಾಠ-ಪ್ರವಚನವೂ ವ್ಯರ್ಥ. ನಿಮ್ಮ ತಪಸ್ಯವೂ ವ್ಯರ್ಥ. ’

ನಿಶ್ಚಲ:– ಆದುದಾದರೂ ಏನು, ಹೇಳಿಬಿಡು ?

ನಿತಾಂತ:– ನಿನ್ನೆಯ ದಿನ ಆ ತುಳಸಿಯು ಸತ್ತವನೊಬ್ಬನನ್ನು

ಬದುಕಿಸಿದನಂತೆ! ನಾವು ಬೀದಿಯಲ್ಲಿ ಹೋದರೆ ನಾಯಿ ಛೂ ಬಿಡುವರು. ಬಾಗಿಲಿಗೆ ಹೋದರೆ ಭಿಕ್ಷ ಹಾಕರು. ಊರ ಜನ ಹುಲಿಗಳಾಗಿದ್ದಾರೆ!

ನಿಶ್ಚಲನಿಗೆ ಕಣ್ಣು ತುಂಬಿ ಹರಿಯಿತು. ನಿರ್ಗುಣೋಪಾಸನೆಯಿಂದ ತನಗಾಗಲಿ ತನ್ನ ಶಿಷ್ಯರಿಗಾಗಲಿ ಪ್ರಯೋಜನವಾಗಲಿಲ್ಲ. ಸೋಲು ಒಪ್ಪಿಕೊಳ್ಳಬೇಕಾಯಿತು. ನಿಶ್ಚಲದಾಸ ಹೇಳಿಬಿಟ್ಟ— 'ನಡೆಯಿರ ಶಿಷ್ಯರೆ! ತುಳಸಿಯ ಹೊಸ್ತಿಲಿಗೆ ಹೋಗೋಣ, ಆತನಿಗೆ ನಾನು ಶರಣಾಗುವುದೇ ಖಂಡಿತ!' ಕೆಲವರು ಒಪ್ಪಿದರು ಕೆಲವರು ಒಪ್ಪಲಿಲ್ಲ. ಆದರೆ ಯಾರಿಗೂ ಬೇರಾವ ಮಾರ್ಗವೂ ತೋಚಲಿಲ್ಲ. ಆಗ ಸಿತಾಂತನೆಂದ 'ತುಳಸಿಯೇನೋ ಸರಿ. ಒಪ್ಪಿದೆ. ದೊಡ್ಡ ಆತ್ಮ; ಆದರೆ ನೋಡಿರಿ. ಆತನ ಸಾವಿರ ಶಿಷ್ಯರೋ, ಅವರೆಲ್ಲ ಉಂಡಾಡಿಗರು, ತುಂಡಾಡಿಗರು. ಬಲು ಕುಚೋದ್ಯಗಾರರು ಅವರು ಇದ್ದಲ್ಲಿ ನನಗೆ ಸರಿಹೋಗದು!' ಆದರೂ ಎಲ್ಲರ ಆಕ್ಷೇಪಣೆಗಳೂ ತೇಲಿಹೋದವು ನಿಶ್ಚಲದಾಸನ ಕನಿಕರ ಕಾವೇರಿಯಲ್ಲಿ. ತುಲಸಿಯ ಕಡೆಗೆ ಮನಸ್ಸು ಕೂಗಿಕೊಂಡು ಓಡಿಬಿಟ್ಟಿತು.

ನಿಶ್ಚಲ ನೂರು ಶಿಷ್ಯರೊಂದಿಗೆ ಹೊರಟನು. ಈ ನೂರು ಜನರಿಗೆ ಅಪನಂಬಿಕ; ಮತ್ತೊ ಆ ಸಾವಿರ ಮಂದಿಗೆ ಹಾಸ್ಯ. ಆದರೆ ತುಳಸಿಯು ಎಲ್ಲ ಬಲ್ಲ! ದೂರದಲ್ಲಿ ನಿಶ್ಚಲನನ್ನು ಕಂಡವನು ಎದ್ದು ನಿಂತು, ಓಡಿಹೋಗಿ ತಬ್ಬಿಕೊಂಡು, ಕೈಕೊಟ್ಟು ಕರೆತಂದನು. ಈ ಸಾವಿರ ಜನಕ್ಕೆ ಆಶ್ಚರ್ಯ; ಮತ್ತೊ ಆ ನೂರು ಜನಕ್ಕೆ ತೃಪ್ತಿ.

ತುಳಸಿಯು ಪೀಠದಲ್ಲಿ ಕುಳಿತು, ಆತನ ಆತಿಥ್ಯಕ್ಕೆ ವ್ಯಮರೆತನು ನಿಶ್ಚಲದಾಸನು. ಅನಂತರ ನಿಶ್ಚಲ ಕೇಳಿದನು—'ತುಳಸೀ, ಇದೆಲ್ಲ ಸರಿ, ನನಗೆ ರಾಮನನ್ನು ತೋರಿಸಬಲ್ಲೆಯಾ?' ತುಳಸಿಯು ನಗನಗುತ್ತ ಎದ್ದು ನಿಂತು ಹೇಳಿದ—'ಕೈಜೋಡಿಸಿ ಬೇಡುತ್ತೇನೆ. ಬಾ ನಿಶ್ಚಲ! ಭಕ್ತಗಂಗೆಯಲ್ಲಿ ಸ್ನಾನ ಮಾಡು, ಸಗುಣೋಪಾಸನೆಯ ದೋಣಿಯಲ್ಲಿ ಕುಳಿತುಕೋ. ಶ್ರೀರಾಮಚಂದ್ರ ಮೂರ್ತಿಯು ಎದುರಲ್ಲಿ ನಿಲ್ಲುವನು 'ಶ್ರೀರಾಮಾ ಭಕ್ತಸುಧಾಮಾ, ಪರಂಧಾಮಾ, ಬಾ' ಎಂದರೆ ಬರುವನು. ನಿಶ್ಚಯವಾಗಿಯೂ ಬಂದೇ ಬರುವನು!'

ನಿಶ್ಚಲ:- ನಿನ್ನ ರಾಮನನ್ನು ನಾನು ನೋಡಿದ ನಂತರ ಅದೆಲ್ಲ!

ತುಳಸಿ.- ಇದೋ ಇಲ್ಲಿ ನೋಡು, ನಮ್ಮಿಬ್ಬರ ವಾದ ಕೇಳಿ ಇಲ್ಲಿ ಬಂದುಬಿಟ್ಟ, ಶ್ರೀರಾಮ! ಇಲ್ಲಿ ನೋಡು!

ನಿಶ್ಚಲ:- ಯಾರವನು! ಆತನು ನಿನ್ನ ಶಿಷ್ಯ ಕೃಪಾ ಅಲ್ಲವೆ?

ತುಳಸಿ:- ನಿಶ್ಚಲ! ನನ್ನ ಸಂಗಡ ಶ್ರೀರಾಮನ ಹಾದಿಯಲ್ಲಿ ನಾಲ್ಕು ಹಜ್ಜೆಯಿಡು. ತರ್ಕಕ್ಕೆ ತತ್ವ ಸಿಗದು; ಪ್ರಯೋಗಕ್ಕೆ ಪುಷ್ಟಿ ಸಿಲ್ಲದು ಬರಿ ನೋಟಕ್ಕೆ ಶ್ರೀರಾಮ ಸಿಗನು. ನಿಶ್ಚಲ, ಭಕ್ತಿ ಬೆರತ ಕಣ್ಣಿನಲ್ಲಿ ನೋಡು ಒಂದು ಇದ್ದಲ್ಲಿ ಭ್ರಮರ ಬರುವಂತೆ, ಭಕ್ತಿ ಇದ್ದಲ್ಲಿ ಶ್ರೀರಾಮ ಬರುವನು! ನೋಡು ಈಗ. ನನ್ನ ಕಣ್ಣಿನಲ್ಲಿ ನೋಡು. ನನ್ನವನು ಬೇರೆ ಮತ್ತೆ ನಿನ್ನವನು ಬೇರೆ ದೇವನಲ್ಲ ನಿಶ್ಚಲ. ದಾರಿ ಬೇರೆ. ಕಡೆಗೆಲ್ಲರೂ ಒಂದೇ ಶಿಖರದ ತುದಿಗೆ ಹೋಗುವವರೇ ಸರಿ. ಈ ಜನಕ್ಕೆ ಈ ದಾರಿ ರುಚಿ. ಈ ಶಿಷ್ಯರಿಗೆ ಹೀಗೆ ಕುಣಿವುದು ಲೇಸು. ಈ ಯುಗದವರಿಗೆ ಹೀಗೆ ಆಶ್ಚರ್ಯಪ್ರದರ್ಶನ ಬೇಕು ಅದಕ್ಕೇ ಹಾಗೆ ಮಾಡಿದ್ದೇನೆ. ಮಹಾತ್ಮೆ ತೋರಿದ್ದೇನೆ. ನಿಶ್ಚಲ, ನಿನಗೆ ಹೇಳುವದೇನಿದೆ! ನನ್ನ ಸಂಗಡ ಹೆಜ್ಜೆ ಇಟ್ಟರೆ, ನನ್ನ ಶಿಷ್ಯರಂಥವರು ದೊರಕೇ ದೊರಕುವರು ಆದರೆ ನಿನಗೆ ಲಾಭವಿಲ್ಲ. ನಿನ್ನ ಶಿಷ್ಯರಿಗ ಲಾಭ ಬಾ, ಹತ್ತಿರ ಬಾ, ನನ್ನೊಂದಿಗೆ ನಿಲ್ಲು ಸಗುಣನಾದ ಶ್ರೀರಾಮನನ್ನು ಕಾಣು 'ಶ್ರೀರಾಮ, ಪರಂಧಾಮ, ಸದ್ಗುಣಧಾಮ, ನಿಶ್ಚಲನಿಗೆ ದರ್ಶನ ಕೊಡು ಬಾ ತಂದೆ, ಬಾ ರಾಮ!' ನಿಶ್ಚಲನು ಭಕ್ತಿಪಂಥದಲ್ಲಿ ಬೆರತು ನಿಂತು, ಶ್ರೀರಾಮನನ್ನು ಕಂಡನು! ಮನೆ ಬಿಟ್ಟು ಓಡಿ ಹೋಗಿ ಮತ್ತೆ ಹಿಂತಿರುಗಿ ಬಂದ ಮಗನು ಹೇಗೋ ಹಾಗೆ, ಶ್ರೀರಾಮರ ಅನುಗ್ರಹಕ್ಕೆ ನಿಶ್ಚಲನು ಮಿಗಿಲಾಗಿ ಪಾತ್ರನಾದನು. ಆತನ ಶಿಷ್ಯರ ಸಂಖ್ಯೆ ಹೆಚ್ಚಿತು ಆತನ ಹೆಸರು ಎಲ್ಲೆಲ್ಲೂ ಹರಡಿತು.

ಇದು ನಿಶ್ಚಲನ ಕತೆ ಇನ್ನು ಒಂದು ದೀಪದಿಂದ ಇನ್ನೊಂದು ದೀಪ ಹೊತ್ತಿಸಿಕೊಂಡರೆ ಮೊದಲಿನ ದೀಪಕ್ಕೆ ಆದ ಕುಂದೇನು? ತುಳಸಿಯ ಆಶ್ರಯದಲ್ಲಿಯೂ ಕೂಡ, ಆತನ ಸಾವಿರ ಶಿಷ್ಯರು ಆನಂದದಲ್ಲಿ ಇದ್ದೇ ಇದ್ದರು.

---

# ಖಸೀ ಮಾವು

ಬೆಳಗಿನ ಸೂರ್ಯನು ಆಗ ತಾನೆ ಗುಡ್ಡದ ಬೆನ್ನ ಮೇಲೆ ಹತ್ತಿ ಬರುತ್ತ ಇದ್ದನು. ಎಲ್ಲೆಲ್ಲಿ ನೋಡಿದರೂ ಹವಳದ ಬಣ್ಣ, ಹಳದಿ ಬಣ್ಣ. ಎಲೆ, ಹೂ, ಕಾಯಿ, ಹಣ್ಣು, ಗೋಡೆ, ಬಾಗಿಲು, ಕಿಟಕಿ, ಮಾಡ ಮುಂತಾದ್ದೆಲ್ಲ ಕಿತ್ತಳೆ ಬಣ್ಣವಾಗಿದ್ದುವು. ಕಾಡಿನ ಹೂಗಳ ಕಂಪಿಗಿಂತ ಮಾಗಿದ ಹಣ್ಣಿನ ಕಂಪೇ ಹೆಚ್ಚಾಗಿತ್ತು. ಗಾಳಿ ಭಾರ ಹೊರಲಾರದೆ ನಿಧಾನವಾಗಿ ಬೀಸುತ್ತಿತ್ತು.

ಹೀಗೆ ಇರುವಾಗ, ಒಂದು ಖಸೀ ಮಾವಿನ ಹಣ್ಣು ಹುಲ್ಲಿನ ಸುಪ್ಪತ್ತಿಗೆಯನ್ನು ಬಿಟ್ಟು ಎದ್ದಿತ್ತು; ಮೊಕ ಒರಸಿಕೊಂಡಿತ್ತು; ಕನಡಿ ನೋಡಿಕೊಂಡಿತ್ತು; ಬಾಗಿಲು ಓರೆ ಮಾಡಿತ್ತು; ಹೊಸಿಲು ದಾಟಿತು; ಉರುಳಿ ಒಂದು ತೋಟದ ಹಾದಿಯಲ್ಲಿ ನಿಂತಿತ್ತು. ಅಗಸೆ-ಬಾಗಿಲ ಬಳಿಯಲ್ಲಿದ್ದ ಜಟಕ-ಗಾಡಿಯವನನ್ನು ಕೂಗಿತು—'ಖಾಸೀಂ! ಗೇಟು ಬಳಿ ಇದ್ದೇನೋ! ಕುದುರೆ ಹೂಡಿ, ಜಟಕಾ ಹೊಡಿ! ಬಾರೋ ಖಾಸೀಂ!'

ಖಾಸೀಂ ಏಳಲಿಲ್ಲ. ಕಂಬಳಿ ಮುಸುಕು ಹಾಕಿದ್ದವನು ಹಾಗೆ ಹಾಗೇ ಕೂಗಿ ಹೇಳಿದ—'ಮಾಲೀಸ್ ಆಗಿಲ್ರಮ್ಮ ದಾಸೀಗೆ ಎಲ್ಲರೂ ಮಾಗಲ್ರಮ್ಮ. ಸ್ವಲ್ಪ ತಾಳ್ರಿ ನಾಳೆ ಹೋದರಾಯಿತು, ಪಾರಿಗೆ ಕಾರಲ್ಲಿ, ಯಜಮಾನ್ರೂನು ಬರ್ತವ್ರೆ.'

ಖಸೀ ರಸಪೂರೀಗೆ ಬಿಸೀ ಮುನಿಸು ಬಂತು—'ಮುಂಚೇನೇ ಎದ್ದು ಕೂಗಿದರೆ ನಿನಗೆಷ್ಟೊ ಹಾಂಕಾರಾ! ನನ್ನ ಗಲ್ಲ ನೋಡು, ಅದು ಎಷ್ಟೊಂದು ಕೇಂಂಂಂಪಗೆ ಇದೆ. ಇಂದೇ ಸರಿ, ಒಳ್ಳೇ ದಿನ! ನಾಳೆ ಏನಿದೆ ಮಂಗನ ಮದಿವೆ! ಇಂದು ಯಾರಾದರೂ ಕರೆಸಿಕೊಂಡಾರು, ಷಾಖ್

ಬಂದಿದಾಳೆ ಷಾಖ್ ಎಂದು ಶೋಕೀ ಇರೋ ಮಂದಿ! ಇಂದೇ ಬಾರೋ ಖಾಸೀಂ ',

ರಸ್ತೇ ಆಚೆ ಬದಿಯಿಂದ ಯಾರೋ ಮಾತಾಡಿದರು—

ಶಾಖ್ ಎನ್ನಿಸಿಕೊಂಡು
ಶೋಕೀ ಮಾಡಿಕೊಂಡು
ಕಾರಲ್ಲಿ ಕೂರುಹೋಗು
ಷಾರಲ್ಲಿ ಕುಣೀ ಹೋಗು......

ಹೀಗೆ ಹೇಳಿದ್ದು ಯಾರು? ಜವಾರೀ ಹಣ್ಣು ಗಾಳಿ ಬಂದು ನಗಿಸಿದಾಗಲೆಲ್ಲ ನೆಗಿನೆಗೀತ ಎತ್ತರದ ಕೊಂಬೆಯ ಮೇಲಿತ್ತು. ಆ ಜವಾರಿ ಹಣ್ಣು ಮತ್ತೆ ಹೇಳಿತು: 'ಯಾವ ಮರದವಳೇ ನೀನು! ದುಡುಮಿ, ಏ ದುಡುಮೀ!'

ಖಸೀ ಮಾವಿಗೆ ಜಂಬ ತೊಟ್ಟಿನ ಕಡೆ ಕೂತು, ಮೂಗು ಉದ್ದ ಮಾಡಿ ಆಕಡೆ ಈಕಡೆ ನೋಡಿತು ಬಿಸಿಲು ಬಿದ್ದ ಆಕಡೆ ಗಲ್ಲ ಇನ್ನೂ ಕೆಂಪಾಯಿತು

ಎತ್ತರದ ಮರದ ಉದ್ದನೆ ಕೊಂಬೆಯ ತುದಿಯಲ್ಲಿ ಜವಾರಿ ಹಣ್ಣು ಅಪ್ಪಟ ಬಂಗಾರವಾಗಿತ್ತು, ಬಣ್ಣದಲ್ಲಿ! ಜೇನು ಕೊಡವಾಗಿತ್ತು, ರಸದಲ್ಲಿ! ಖಸೀ ಮಾವನ್ನು ನೋಡಿ ಮತ್ತೆ ಮತ್ತೆ ನಕ್ಕುಬಿಟ್ಟಿತು.

ಖಸೀ ಎಂದಿತು—' ಯಾವ ಕಂತ್ರೀಗಿಂತ ನಾನೇನು ಕಡಿಮೆ ಇಲ್ಲ! ಗೇಟು ತೆಗಿಯೋ ಖಾಸೀಂ! ಕಾರು ಬರ ಹೇಳೋ, ಷಾರಿಗೇ ಹೋಗಬೇಕು ಈ ದಿನ ಷಾಖ್ ಆಗಿ ಷೋಕೀಲಿ. '

ಜವಾರಿ ತೊಟ್ಟಿನ ತುದಿಯಲ್ಲಿ ನಿಂತು, ರೆಂಬೆಯ ತುದಿಯಲ್ಲ ಕೂತು ಹೀಗೆಂತು—' ಅಬ್ಬಬ್ಬಾ! ಗೇಟು ಕೋಟು, ಜವಾನ ದವಾಲ, ಕಾರು ಬಾರು..ಅಬ್ಬ! ಮೋಟಾರ್ ಕಾರ್ ಬೇರೆ, ಪೇಟ ಬೇಡವೇನೋ ಈ ರಂಡೋಲೀಗೆ, ಲೇ, ಊದಲ-ಗಲ್ಲೀ, ಮಾತು ಬಂದರೆ ಆಡೇ, ಲೇ ರಂಡೋಲೀ!..'

' ರಂಡೋಲೀ. ರಂಡೋಲೀ.. ' ತೋಟದಲ್ಲಿ, ತೋಪಿನಲ್ಲಿ, ನಾಲು ಮರದಲ್ಲೆಲ್ಲ ಇದೇ ಕೂಗೇ ಆಗಿಬಿಟ್ಟಿತು. 'ಅಡಗಿಸಿ ಬಿಡಬೇಕು ಈ ಹರಟೀನಾ!' ಹೀಗೆಂದು ಖಸೀ ಹಣ್ಣು ಎಂತು—' ಹೌದೇ ನನ್ನ ಮೈ ದಪ್ಪ,

ನಾನು ಕೆಂಪು, ನನ್ನ ಪಡೆದವರಿಗೆ ನಾನು ಸುಖಾ ಕೊಡೋಳು. ನಾನೇನು ಕ್ಷಾಮದೇವತೆಯಲ್ಲ;ನಿಪ್ಪೆನುಲಿದರೆ ಹೋತನ ಗಡ್ಡದವಳಲ್ಲ. ತಿಂಡೀ-ತೀರ್ಥಾ ಎಂದು ಸುಖದಲ್ಲಿ ಜೇಲಿಯು ಒಳಗೆ ಬೆಳಸಿದ್ದಾರೆ ನಮ್ಮನ್ನೆಲ್ಲ ನಿನ್ನ ಹಾಗ ಭಿಕಾರಿ ಬಿಟ್ಟೀ ಊರ ಹಾದಿಯಲ್ಲಿ ಬೆಳೆದವರಲ್ಲ ಕಣೇ ನಾವು! ಪಡೂ ಗಾಳಿಗೆ ತುಪತುಪ ಉದುರುವರಲ್ಲ ನಾವೇನು! ಅದೋ ನೋಡು, ಕಾರು ಬಂತು. ಕೂರುತೇನೆ ಕಾರಲ್ಲಿ. ನಿನ್ನ ಹೊಟ್ಟೇ ಉರಿಸಿಕೋ. ನಗೇ, ನಗೇ! ಇನ್ನಷ್ಟು ಬೇಕಾದರೂ ನಗು!'

ಜವಾರೀಗೆ ಸಿಟ್ಟು ಬರಲಿಲ್ಲ. ಆದರೂ ಹೇಳಿತು. 'ನೀನು ಕಾರಲ್ಲಿ ಷಹರಿಗೆ ಹೋಗೋ ಮುನ್ನ ಕೇಳಿಸಿಕೋ ನಿನ್ನ ಕತೆ—ಬೆಳೆದು ಬೆಳೆದು ನಿನ್ನಮ್ಮ ತ್ರಾಣವಿಲ್ಲದೆ ನೆಲದ ಮೇಲೆ ಹಸಪ್ಪರಿಸಿಕೊಂಡು ಕುಕ್ಕರಿಸಿಗೊಂಡಾಗ್ಗೆ, ನೀವೆಲ್ಲಾ ಹುಟ್ಟಿದಿರಿ ಎಲ್ಲಾರು ನೆಲಕಚ್ಚಿ ಕುಳಿತುಬಿಟ್ಟಿರಿ ಆಗ ಆ ಮ್ಲೇಚ್ಛ ಬಂದು, ಆ ನಿನ್ನ ಖಾಸೀಂ ಇದ್ದಾನಲ್ಲ ಅವನು, ನಿಮ್ಮನ್ನೆಲ್ಲ ಕಿತ್ತು ದರ್ಭೆ ಹಾಕಿ ಮಲಗಿಸಿದ್ದ. ಅವರೆಲ್ಲ ಇನ್ನೂ ಮಾಗಿಲ್ಲ. ನೀನು ಮಾತ್ರ ಎಲ್ಲೋ ಗುಂಗೆ ಹೊಕ್ಕು, ಎದ್ದು ಬಂದಿದ್ದೀಯೇ! ಆ ಹುಳುಕು ಮುಚ್ಚಿಗೊಳ್ಳೇ! ಆ ನಿನ್ನ ಹುಳುಕ!'

ಖಸೀಮಾವು 'ನೀನೋ!' ಎಂದು ಮೂಗು ಮೇಲು ಮಾಡಿತು.

ಜವಾರಿ, 'ನಾನಲ್ಲ, ನಾವು ಕಾಣೆ! ಕಾಣೆಯೇನು ನಮ್ಮನ್ನ, ನಾಡಿನ ದೇವಿ ಇಟ್ಟು ತೊಡುವ ಜವಾಹಿರೀ ಒಡವೆಗಳು ನಾವು! ಎಲ್ಲಿ ನನ್ನ ಯಾರು ಮುಟ್ಟಿಯಾರು? ಆ ಗಿಳಿರಾಮು ಬಂದರೆ ಬಂದಾನು. ಇನ್ನಾರಿಗಿದೆ ಎದೆಗಾರತನ! ಮುಳ್ಳು-ಜೇಲಿಯಲ್ಲಿ ಬೆಳೆಯಲಿಲ್ಲ ನನ್ನಮ್ಮ. ದಣಿದವರಿಗೆಲ್ಲ ನೆರಳಾಗಿ ಬೆಳೆದಿದ್ದಾಳೆ ನನ್ನಮ್ಮ. ತೆಳ್ಳಗೆ ಬಳಕುತ್ತ ನಿಂತಿದ್ದಾಳೆ ನೋಡು ಬಿಸಿಲು-ಪೀತಾಂಬರ ಉಟ್ಟಿದ್ದಾಳೆ. ಕೊಂಬೆರೆಂಬೆ ತುಂಬ ಹೂವು ಹಣ್ಣಿಟ್ಟುಗೊಂಡು ಪೂಜೆಗೆ ಹೊರಟ ಪಾರ್ವತೀ ಹಾಗೆ ನಿಂತಿದ್ದಾಳೆ ಕೇಳೇ ನನ್ನ ಕತೆ! ಸಂತೋಷ ಪಡು, ನನಗೆ ದೂರದ ಸಂಬಂಧ ಕಣೇ ನೀನು!' ಎಂದು ನಕ್ಕಳು.

ಖಸೀಹಣ್ಣು 'ಏನೇನಿದೆ ಎಲ್ಲ ಹೇಳಿಕೊ, ಕಾರು ಬರೂವರೆಗೆ.' ಎಂದು ಗಲ್ಲದ ಮೇಲೆ ಕೈಯಿಟ್ಟುಕೊಂಡು ಕಣ್ಣುಬಿಡುತ್ತ ಕುಳಿತಿತು.

ಜವಾರಿ ' ಕೇಳೇ ದೊರೆಸಾನಿ! ಮಾವಿನರಾಣಿ! ಫಾಲುಗುಣದಲ್ಲಿ ನಸ್ಸನ್ನು ಹೂ ಬಿಟ್ಟರೆ—ದುಂಬಿ, ಜೇನು, ಚಿಟ್ಟೆ, ಗಿಳಿ, ಕೋಗಿಲೆ ಹೀಗೆ ಬರೋರು ಹೋಗೋರ ಜಾತ್ರೆ ಮಧುಮಾಸದಲ್ಲಿ! ಘಮ ಘಮ ಕಂಪಿಗೆ ಫಾಲ್ಗುಣದ ಚಂದ್ರ ಹುಚ್ಚು ಹತ್ತಿ ಆಕಾಶವನ್ನೇ ಮರೆತುಬಿಡುತ್ತಾನೆ. ಅದಾವುದೋ ಬಿರುದು ಇದೆಯಲ್ಲ ಒಬ್ಬ ಕವೀಗೆ– ಕರ್ಣಾಟ ಕವಿಚೂತವನ ಚೈತ್ರ–ಎಂತ, ಅಲ್ಲಿ ಚೂತವನ ಎಂದರೆ ಯಾವುದು, ಖಸೀ ಮಾವಿನ ತೋಪೇನು? ಅಲ್ಲ ಕಣೇ ಅಲ್ಲ! ಜವಾಹಿರೀ ಮಾವಿನ ತೋಪು, ಜವಾಹಿರೀ ತೋಪು! ನಮ್ಮವರ ಚೂತ ವನ ಅದು ನಾವೆಲ್ಲ ಮುಳ್ಳು ಬೇಲಿ ಕಂಡ ವರಲ್ಲ ಸರ್ವತಂತ್ರ ಸ್ವತಂತ್ರರಾಗಿ ಬೆಳೆದವರಮ್ಮ ಬೆಳೆಯುವವರಿಗೆ ಪಾತಾಳ ದಿಂದ ಪಿಪೀಲಿಕಾ ಬಂದು ಮೊಕ ಮ್ಯೆ ತಿಕ್ಕಿ ಹೋಗುವುದು ಕಣಮ್ಮ. ಬೆಳೆದ ಮೇಲಂತೂ, ರೆಕ್ಕ ಇದ್ದವರೇ ನಮ್ಮ ಜೊತೆಗ! ಇನ್ನಾರೂ ಮುಟ್ಟು ರಮ್ಮ ನಮ್ಮನ್ನ! ' ಎಂದು ಹೇಳಿತು

ಖಸೀ ಮಾವಿಗೆ ಇಷ್ಟೆಲ್ಲ ಕೇಳಿ ಮೊಕ ಬೆಳ್ಳಗಾಯಿತು. ಸ್ವಲ್ಪ ಓರೆ ಯಾಗಿ ಕುಳಿತುಕೊಂಡಿತು ಆಕಡೆ ಹುಳು ಕೊರೆದ ರಂಧ್ರ ಇತ್ತು! ಮೂಗು ಮೇಲು ಮಾಡಿ ಮೆಲ್ಲಗೆ ಹೇಳಿತು ' ಈಗ ತಾನೆ ಕಾಗದದ ಮುಸುಕು ಬಿಟ್ಟು ಹೊರಗೆ ಬಂದೆ ಕಣೇ ಅಕ್ಕ. ಕಾರಲ್ಲಿ ಬಾ, ಷಾರಿಗೆ ಹೋಗೋಣೇ! '

ಅಷ್ಟುಹೊತ್ತಿಗೆ ಕಾಮನ ಅರಗಿಣಿಯೊಂದು ಬಂದು ಜವಾರೀ ಹಣ್ಣಿಗ ಮುತ್ತು ಕೊಟ್ಟಿತು. ಆ ಗಿಣೀಗೆ ರಸ ಕೊಡುವ ಗದ್ದಲದಲ್ಲಿ ಜವಾರಿ ಮಾತಾಡಲಿಲ್ಲ. ಹೀಗೆ ಜವಾರಿ ಏಕಾಂತದಲ್ಲಿ ಗಿಳಿಯ ಸಂಗಡ ಇದ್ದಾಗ, ಕಾರು ಬಂತು, ಭಾರಿ ಷಾರಿಂದ

ಕಾರು ನಿಂತಿತು. ಒಬ್ಬ ಪುಟ್ಟ ಹುಡುಗ ಇಳಿದು ಬಂದ. ಖಸೀ ಹಣ್ಣನ್ನು ನೋಡಿ ಹಿಗ್ಗಿದ. ತೆಗೆದು ಗಲ್ಲಕ್ಕೆ ಒತ್ತಿಕೊಂಡ ರೇಶ್ಮೆ ಚೌಕ ದಲ್ಲಿ ಮರೆಮಾಡಿಕೊಂಡ. ಕಾರಲ್ಲಿ ಮೊಕ್ಮಲ್ಲು-ದಿಂಬಿನ ಮೇಲಿಟ್ಟ. ತಾನು ಪಕ್ಕದಲ್ಲಿ ಕುಳಿತುಕೊಂಡ. ನಿಮಿಷಕ್ಕೆ ಒಂದು ಮೈಲಿ ಪೋಟಾರೋಟ. ಹಾದಿಯ ಮರಗಳೆಲ್ಲ ಹಾರಿ ಹೋದವು. ಬೀದಿಯ ಮನೆಗಳೆಲ್ಲ ಬಾದು ಓಡಿದವು. ಕಾಂಪೌಂಡು ಬಂಗ್ಲಿ ಬಂತು. ಗೇಟು ತೆಗೀತು. ಪುಟ್ಟ ಹುಡುಗ

ಮೆಟ್ಟಿಲಲ್ಲಿ ಇಳಿದ. ಕಲಾಪತ್ತಿನ ಪರದೆ ಓರೆ ಮಾಡಿ ಚಿತ್ತಾರದ ಮನೆ ಒಳಗೆ ಹೋದ ಮೆಟ್ಟಿಲು ಮೇಲೆ ಮೆಟ್ಟಿಲು ಹತ್ತಿದ್ದೇ ಹತ್ತಿದ್ದು ಉಪ್ಪರಿಗೆ ಮೇಲೆ ಉಪ್ಪರಿಗೆ ಏರಿ ಹೋದ. ಎಲೆಕ್ಟ್ರಿಕ್ ಬೀಸಣಿಗೆ ಬುಡದಲ್ಲಿ ಕೂತುಕೊಂಡ ದಂತದ ಹಿಡಿ ಹಾಕಿದ ಬೆಳ್ಳಿ ಚೂರಿ ತೆಗೆದುಕೊಂಡ. ಬಂಗಾರದ ತಟ್ಟೆಯಲ್ಲಿ ಇಟ್ಟು ಒಂದು ಚೂರು ಕುಯಿದುಕೊಂಡ..!

ರಂಗಿನ ಕೆಳಗೆ ಮಂಗ!
ಸಿಪ್ಪೆ ನೋಡಿದೆಯ, ಎಷ್ಟು ದಪ್ಪ!
ಹೋಳು ನೋಡಿದೆಯ, ಹುಳಿ ಹುಚ್ಚಾರು!
ಹಳಸಲು ವಾಸನೆ, ಅಯ್ಯೋ ಹುಳು ಕೂರೆದೇಬಿಟ್ಟಿದೆ!
ಧೂ! ಇದೇಕೆ ಕಪ್ಪ ಇಷ್ಟೊಂದು ಬಣ್ಣ! ಅಯ್ಯೊ ಖಸೀ ಹಣ್ಣೇ!

ಶಸ್ತ್ರೋಪಚಾರಮಾಡಿಸಿಕೊಂಡ ಖಸೀಮಾವು ಏಳು ನೆಲೆ ಉಪ್ಪರಿಗೆಯಿಂದ ಕೆಳಗಿಳಿದು ದೊಪ್ಪನೆ ಬಿದ್ದಿತು. ಕಾಂಪೌಂಡಿನಲ್ಲಿದ್ದ ನಾಯಿ ಬಂದು ಮೂಸಿ ನೋಡಿ ಹೋಯಿತು. ಖಸೀ ಹಣ್ಣಿನಿಟ್ಟುಸಿರಿಟ್ಟು ಮಣ್ಣಲ್ಲಿ ಮಗ್ನ ಲಾಯಿತು!

ಖಸೀಹಣ್ಣಿನ ಗತಿ ಹೀಗಾದಾಗ್ಗೆ ಜವಾಹಿರಿಯು ಏನು ಮಾಡುತ್ತಿತ್ತು? ಅದು ಅರಗಿಳಿಯ ಸಂಗದಲ್ಲಿ ತೃಪ್ತವಾಗಿ, ಪಕ್ವವಾಗಿ, ಕೆಳಗೆ ಇಳಿದು ಬಂತು! ಅರಗಿಳಿ ಸಹ ಸಂಗಡ ಬಂದು, ಅದನ್ನು ಭೂಮಿತಾಯಿಯ ಮಡಲಲ್ಲಿ ಮಲಗಿಸಿ ಹೋಯಿತು! ಮುಂದಾಗಿ ಬಂದಿದ್ದ ಹೂಗಳೆಲ್ಲ ಮೆತ್ತಗೆ ಸುತ್ತಿಕೊಂಡವು. ಎಲೆಗಳು ಹೊದ್ದಿಕೆ ಮಾಡಿದವು. ಜವಾರಿಗೆ ಸಿದ್ದಿ, ಭಾರಿ ಸಿದ್ದಿ!

ವಾಟೆ ಹುಳಿತ ಖಸೀ ಹಣ್ಣು ಗೆದ್ದಲು ಪಾಲಾಯಿತು! ಗಿಣಿ ಕಚ್ಚಿದ ಜವಾರಿ ಹಣ್ಣು ತಾಯಿ ಮರದ ಬುಡದಲ್ಲಿ ಮಲಗಿತು, ಗಿಡವಾಗಿ ಬೆಳೆಯುವುದಕ್ಕೆ, ಮರವಾಗಿ ಏಳುವುದಕ್ಕ; ನೆರಳಾಗಿ ನಿಲ್ಲುವುದಕ್ಕ—ಮತ್ತೆಲ್ಲಕ್ಕೆ ಮೇಲಾಗಿ ಹೂ ಬಿಟ್ಟು, ಹಣ್ಣು ಕೊಟ್ಟು ಕನ್ನಡನಾಡಿನ ಜವಾಹಿರಿಯಾಗಿ ಬಾಳುವುದಕ್ಕೆ, ಬದುಕುವುದಕ್ಕ!

'ಖಸಿ ಹುಸಿ! ಜವಾರಿ ಜವಾಹಿರಿ!'

---

# ಚಿಟ್ಟೆ ಹತ್ತಿಸುವುದು

ಚಲೋ ಚಿಟ್ಟೆ, ಬಣ್ಣಬಣ್ಣದ್ದು, ಸಿಕ್ಕಿದರೆ ದುರಗುಟ್ಟಿ ನೋಡುವರಂತೆ. ಬೆಳುದಿಂಗಳ ಗಟ್ಟಿಯಂಥ ಚಿನ್ನ ಸಿಕ್ಕುವುದೇ ತಡ ಹಾರಾಡಿ ನೆಗದಾಡಿ ಹಿಂಬಾಲಿಸುವರಂತೆ. ಕಾಮನ ಕೂಸಿನಂಥ ದೊಡ್ಡ ರೆಕ್ಕೆಯ ಪತಂಗ ಸಿಕ್ಕಿದರೆ ಬಲೆಯಲ್ಲಿ ಹಿಡಿದು, ಹೊಗೆ ಕುಡಿಸಿ, ಬೆನ್ನಿಗ ಗುಂಡು-ಸೂಜಿ ಚುಚ್ಚಿ, ಮೊಖಮಲ್ಲಿನ ದಿಂಬಿಗೆ ಸಿಕ್ಕಿಸಿ, ಕನ್ನಡಿ-ಪೆಟ್ಟಿಗೆಯಲ್ಲಿ ಇಡುವರಂತೆ ಮತ್ತೊ, ಭಾರಿ ಭಾರಿ ಪುಸ್ತಕಗಳನ್ನೆಲ್ಲ ಮೊಗಚಿ ಹಾಕಿ ಅದಕ್ಕೊಂದು ಹೆಸರು ಗೊತ್ತುಮಾಡಿ ಅದನ್ನ ದಂತದ ಪಲಗೆಯಲ್ಲಿ ಬರೆದು, ಆ ಚಿಟ್ಟೆಯ ಬಳಿ ಇಡುವರಂತೆ ಅಂಥಾವರೊಬ್ಬರು ಸಿಂಗಪ್ಪನವರು ಈ ಸಿಂಗಪ್ಪನವರ ಮನೆಯಲ್ಲಿ ನೂರಾರು ಜಾತಿಯ ಚಿಟ್ಟೆಗಳಿವೆಯಂತೆ.

ಅದೊ ದಾಸೋಜ ಅಲ್ಲೇ ಬಂದ. ಅವನ ಕೈಲಿ ಗಾಜಿನ ಹೂಜಿ. ಆ ಹೂಜಿಯಲ್ಲಿ ಒಂದು ಚಿಟ್ಟೆ. ಕಾಮನಬಿಲ್ಲಿನ ಖಾಸಾ ಮಗುವಾಗಿತ್ತು ಆ ಚಿಟ್ಟೆ. ಗಂಧರ್ವ ಪತಂಗ ಅದು. ಪುಷ್ಯರಾಗದ ಕಣ್ಣು, ಕಾಡಿಗೆಸೊಂಡಿಲು, ಮೊಖಮಲ್ಲು-ರೆಕ್ಕೆ, ಮತ್ತೆ ಗರಿಮೀಶೆ. ಇವೆಲ್ಲವನ್ನೂ ಒಂದು ಬಾರಿ ನೋಡಿದರೆ ಸಾಲದು, ಸಾವಿರ ಬಾರಿ ನೋಡುತ್ತ ಇರಬೇಕು. ಆ ಹೂಜಿಯಲ್ಲಿ ಆ ಚಿಟ್ಟೆಯು ದಿಕ್ಕೆಟ್ಟು, ರೆಕ್ಕೆ ಮುದುರಿ ಕೂತಿತ್ತು.

ಲೋಲಕ್ಕ ಅಲ್ಲಿಗೆ ಬಂದಳು 'ದಾಸೋಜ, ಅದೇನು ತೋರಿಸೊ. ಗಾಜಿನ ಹೂಜೀ, ಒಳಗೇನೊ ?'

ದಾಸೋಜ:- ಅದೇ, ನಿಂಗಲ್ಲ ಸಿಂಗಪ್ಪನವರಿಗೆ ಕೊಡುವಂಥ ಚಿಟ್ಟೇರಾಜ.

ಲೋಲ:- ರೆಕ್ಕೆ ಮುದುರಿದೆ

ದಾಸೋಜ:- ರೆಕ್ಕೆಯೆ! ಹೊಗೆ ಕುಡಿಸಿ, ಬೆನ್ನಿಗೆ ಸೂಜಿ ಚುಚ್ಚಿದರೆ ಆಗ ರೆಕ್ಕೆ ಚೆನ್ನಾಗಿ ಬಿಚ್ಚುತ್ತೆ

ಲೋಲ:– ಅದನ್ನ ಗುಲಾಬಿ ಹೂವಿನ ಮೇಲೆ ಬಿಡೋಣ ಬಾ ಸಿಂಗಣ್ಣನ ಹೊಗೇನೂ ಬೇಡಾ, ಆ ಬೆನ್ನಿಗೆ ಸೂಜೀನೂ ಬೇಡ.

ದಾಸೋಜ:– ನೀನೇನು ಬಲ್ಲೆ ಅದರ ಸುಖಾನ ಮುಕಪುಲ್ಲು ಪೆಟ್ಟಿಗೆ, ಗಾಜಿನ ಮುಚ್ಚಳ, ದಂತದ ಹಲಗೆ ಅದರ ಹತ್ತಿರ ಇದರ ಜಾಗ. ನೋಡುವುದಕ್ಕೋ ಘನ ಘನ ವಿದ್ವಾಂಸರು. ನಿತ್ಯ ನಿತ್ಯ ಪರಿಶೆ ಅಲ್ಲ ಅದೇನೋ ಸಿಂಗಪ್ಪನವರು ಈ ಚಿಟ್ಟೆಯ ಮೇಲೆ ಒಂದು ಪುಸ್ತಕವನ್ನೇ ಬರೆದು ಬಿಡುವರು ನನ್ನ ಕೈಗೆ ಸಿಕ್ಕುವುದಕ್ಕೆ ಇದು ಇನ್ನೆಷ್ಟು ಪುಣ್ಯ ಮಾಡಿತ್ತೋ.

ಲೋಲ:– ಇದೇ ಗುಲಾಬಿಯ ಗಿಡದ ಮೇಲೆ ಅಲ್ಲೊಂದು ಚಿಟ್ಟೆ ಇದೆ. ಅಲ್ಲಿ ಅಲ್ಲೋ, ಈಗ ಹಾರಿಬಂತು. ಇದರ ಹಾಗೇ ಇದೆ. ನೋಡು ಆ ಹೂವಿನ ಮೇಲೋ ! ಅದು ಇದು ಜೋಡಿಯಾಗಬಹುದಪ್ಪ !'

ದಾಸೋಜನಿಗೆ ಲೋಲಕ್ಕನ ಮಾತು ಬೇಕಾಗಿರಲಿಲ್ಲ. ಈ ಚಿಟ್ಟೆ ಹಿಡಿಯುವುದಕ್ಕೆ ಅವನು ಬಲು ದೂರ ಹೋಗಿದ್ದನು. ಬೆಟ್ಟದ ಬಳಿ ನೀರು ದಡ ಧಡ ಬೀಳುತ್ತ ಇತ್ತು. ಹಕ್ಕಿಗಳು ಹಾರಾಡುತ್ತ ಇದ್ದವು. ಮರಗಳ ತುಂಬ ಹೂಗಳು ಅರಳಿದ್ದವು ನೆಲಕ್ಕೆಲ್ಲ ಸುರಗಿಯ ದಳ ಹಾಸಿತ್ತು. ಅಲ್ಲಿ ಇಂಥ ಪಾತರಗಿತ್ತಿಗಳು ಬಹಳ ಇದ್ದುವು. ಅಲ್ಲಿ ಹೋಗಿ ಬಹಳ ಶ್ರಮ ಪಟ್ಟು ಸಿಂಗಣ್ಣನವರು ಕೊಟ್ಟ ಬಲೆ ಬೀಸಿ ಹಿಡಿದಿದ್ದಾನೆ ದಾಸೋಜ ಅಲ್ಲದೆ ಈ ಚಿಟ್ಟೆಗಾಗಿ ಈಗ ತಾನೆ ಕೈತುಂಬ ತಾಮ್ರದ ಕಾಲಾಣೆಗಳು ಸಿಕ್ಕುತ್ತವೆ. ಆ ದುಡ್ಡಿಗಾಗಿ ಅಂಗಡಿಯಲ್ಲಿ ಏನೇನೋ ಪದಾರ್ಥಗಳೆಲ್ಲ ಕಾದಿವೆ—ಬುಗರಿ, ಕ್ಯಾಟರ್‌ಬಿಲ್ಲು, ಬಣ್ಣದ ಪೆನ್ಸಿಲ್ಲು, ಗೋಲಿಗಳು, ಶುಂಠಿ ಪೆಪರ್‌ಮಿಂಟುಗಳು. ಅವೆಲ್ಲ ಕೊಂಡೊಯ್ದರೆ ಸ್ಕೂಲಲ್ಲಿ, ಆಟದ ಮೈದಾನ ದಲ್ಲಿ ದಾಸೋಜ ಇದ್ದಲ್ಲಿ ಪರಿಶೆ ಕಟ್ಟಿ ಹೋಗುತ್ತದೆ. ಅದೆಲ್ಲ ಅವನ ಕಣ್ಣಿಗೆ ಕಟ್ಟಿರುವಾಗ್ಗೆ ಈ ಚಿಟ್ಟೆಯನ್ನು ಜೋಪಾನ ಮಾಡದೆ ಹೋದಾನೆ !

ದಾಸೋಜ:– ಇರಲಿ ಬಿಡು ಇದನ್ನು ಕೊಟ್ಟು ಬಂದು, ಅದನ್ನು ಹಿಡಿದು ತಂದು ಅಲ್ಲಿ ಸಿಂಗಣ್ಣನವರ ಮನೆಯ ಗಾಜಿನ ಪೆಟ್ಟಿಗೆಯಲ್ಲಿ ಇವೆ ರಡಕ್ಕೂ ಲಗ್ನವಾಗುತ್ತೆ. ಬಿಡು, ಈಗ ಬಂದೆ !

ಲೋಲಕ್ಕ:– ಏನು ಧೀರನೋ ! ಅಬ್ಬ ! ನಿನಗೆ ಎಷ್ಟು ಬೇಕೋ

ಹಣ? ನಾಳೆ ನವಪೀಗೆ ಬಾರೋ ಸನ್ನ ಭಂಡಾರ ಒಡಿಯೋ, ಒಂದು ರೂಪಾಯಿ ಗಟ್ಟಿ ಕೂಡಿಸುತ್ತೇನೋ ಚಿಟ್ಟೆ ಹಿಡಿದುಕೊಟ್ಟ ಆ ಘಾತುಕ ನಿಗೆ ...ಸನಗೆ ರೇಗಿಹೋಗುತ್ತೆ ನೋಡು

ದಾಸೋಜ.– ಯಾಕೇ ರೇಗುವ್ರದು ? ನಿನಗೇನು ಸನ್ನ ಗೋಜು.

ಲೋಲಕ್ಕ·– ಅಲ್ಲಪ್ಪ, ಇಲ್ಲಿ ಬಾ, ಧೈರ್ಯವಿದ್ದರೆ ಬಾಂದೆ!

ದಾಸೋಜ:– ಓಹೋ ಧೈರ್ಯವಿನ್ನೇನು, ಬಂದೆ ಕಣಕ್ಕ, ಏನು, ಏನೂ ?

ಲೋಲಕ್ಕ – ಅಲ್ಲಿ ನೋಡಪ್ಪ, ಅಲ್ಲೋ ನೀಲಿ ಆಕಾಶದ ಕಡೆ.

ದಾಸೋಜ:– ಹೂಂ. ಏನೋ ಕಾಣುತ್ತೆ. ಎರಡೇನೋ ಇವೆ.

ಲೋಲಕ್ಕ:– ಅವೆರಡು ನಮ್ಮನೆ ಜೋಡಿ ಪಾರಿವಾಳ.

ದಾಸೋಜ:– ಆಗಲಿ ಆದರೇನು ?

ಲೋಲಕ್ಕ:– ಇಲ್ಲಿ ನೋಡು ಈ ಕಡೆ, ಆ ಜೋಲಾಡುವ ಗುಲಾಬೀ ದೊಡ್ಡ ಗೊಂಚಲ ಹತ್ತಿರ!

ದಾಸೋಜ:– ನೋಡಿದೆ. ಒಂದೇ ಚಿಟ್ಟೆ ಇದೆ. ನಿಜ ಈಗಲೇ ಅದನ್ನೂ ಹಿಡಿತೇನೀ! ಬಿಡು ಹೊರಡತೇನೀ!

ಲೋಲಕ್ಕ:- ಹೋಗುವಿಯಂತೆ!

ದಾಸೋಜ:– ಬಿಡೇ ವುತ್ತೆ!

ಲೋಲಕ್ಕ:– ಇಲ್ಲಿ ನೋಡು, ಈ ಕಡೆ ಅಲ್ಲವ್ರೋ ನನ್ನ ಕಡೇನೋ! ನೋಡು!

ದಾಸೋಜ:– ಏನೇ ಅದು, ಹೀಗೆಲ್ಲ ಮಾಡಿದರೆ. ಏನಮ್ಮ ಹೇಳೇ!

ಲೋಲಕ್ಕ:– ಆ ಚಿಟ್ಟೆ ಸನ್ನ ಕೈಲಿ ಕೂಡೋ.

ದಾಸೋಜ:– ಅದಾಗುಲ್ಲ! ಸುಮ್ಮನೆ ನೋಡು ಬೇಕಾದರೆ.

ಲೋಲಕ್ಕ:– ಗಾಜಿನ ಹೂಜೀ ಕೊಡೋ!

ದಾಸೋಜ:– ಯಾಕೇ! ನೀನೇ ತರುತ್ತೀಯ ಸಿಂಗಣ್ಣನ ಮನೆಗೆ!

ಲೋಲಕ್ಕ:– ಓಹೋ!

ದಾಸೋಜನು ಚಿಟ್ಟೆ ಇಟ್ಟಿದ್ದ ಹೂಜಿಯನ್ನು ಕೈಗೆ ಕೊಟ್ಟ. ತಕ್ಷಣವೇ ಲೋಲಕ್ಕನ ಮನಸ್ಸು ಎಲ್ಲೆಲ್ಲೋ ಹಾರಿ ಹೋಯಿತು. ಸ್ವಲ್ಪ

ದೂರ ಹೋದಳು. ಹೂಜಿಯನ್ನು ಎದೆಗೆ ಅವುಚಿಕೊಂಡಿದ್ದಳು. ಎದೆಯ ಕಾವಿಗೆ ಚಿಟ್ಟೆ ಎಚ್ಚತ್ತು ರೆಕ್ಕೆ ಅಲ್ಲಾಡಿಸಿತು. ನೋಡುತ್ತಾಳೆ ಆ ಬಣ್ಣದ ಬೆಡಗು ಥೇಟು ನವಿಲು-ಗರಿ ಕಣ್ಣುಗಳೆರಡು ರೆಕ್ಕೆಗಳು. ಉದ್ದ ಮೀಸೆಗಳು ವೈಡೂರ್ಯದ ಕಣ್ಣುಗಳು ಆಹಾ! ಇಂಥಾದ್ದೇ ಅದೂ, ಆ ಗುಲಾಬಿಯ ಹೂವಿನ ಬಳಿಯಲ್ಲಿದ್ದ ಚಿಟ್ಟೆ. ಹೀಗೆಂದು ಹೂಜಿಯ ಮೇಲಿದ್ದ ಗಾಜಿನ ಮುಚ್ಚಳ ತೆಗೆದು ಬಗ್ಗಿ ನೋಡಿದಳು.

ಅಷ್ಟುಹೊತ್ತಿಗೆ ಗಲ್ಲದ ಬಳಿ ಏನೋ ಸುಳಿದ ಹಾಗಾಯಿತು. ನೋಡುತ್ತಾಳೆ, ಅದೋ ಇನ್ನೊಂದು ಚಿಟ್ಟೆ ಹೀಗೇ ಇದೆ.

ಲೋಲಕ್ಕ:– ದಾಸೀ ಅಲ್ನೋಡು ರೆಕ್ಕೆ ಬಿಚ್ಚಿದೆ

ದಾಸೋಜ:- ಬೇಗ ಬಾರೇ. ನಿನ್ನ ಕೈಬಿಸೀಗೆ ಅದು ಹಾಗೆ ಮಾಡುತ್ತೆ.

ಲೋಲಕ್ಕ:– ಸಿಂಗಣ್ಣನ ಮನೆ ನಾನು ಬರುವಲ್ಲೆ. ತಗೋಳ್ಳಪ್ಪ ನಿನ್ನ ಹೂಜಿ.

ದಾಸೋಜ:– ಲೇ ಚಿಟ್ಟೆ ಏನು ಮಾಡಿಬಿಟ್ಟೆ! ಅಯ್ಯೋ!

ಲೋಲಕ್ಕ:– ಅಮ್ಮ ಕರಿತಾಳಪ್ಪ! ಚಿಟ್ಟೆ ಅದರ ಜೋಡೀ ಹಾರೀ..

ದಾಸೋಜ:- ಅಯ್ಯೊಯ್ಯೋ! ಹಾರಿಸಬೇಡವೇ, ಬೇಡ ನೋಡು! ಇದೇನೇ ಲೋಲಾ! ಕೈಗೆ ಸಿಕ್ಕು ಇನ್ನೊಂದು ಬಾರಿ! ಚದುರೆ ಚಿಟ್ಟೆ! ಲೇ ಪತಂಗೀ! ಥೂ ಪಾತರಗಿತ್ತಿ!

ಲೋಲಕ್ಕ:- ಅಮ್ಮ ಕರೀತಾಳೆ ಹೋಗತೇನಪ್ಪ! ಬೇಕಾದರೆ ಮಧ್ಯಾಹ್ನ ಬಾ ನನ್ನ ಕೈಬಳೆ ದುಡ್ಡಿದೆ ಕೊಡುತ್ತೇನೆ, ಆ ಚಿಟ್ಟೇ ಬದಲಿಗೆ! ನಾಕಾಣೆನೋ!

ಹೀಗೆಂದು ನಗುತ್ತ ಲೋಲಕ್ಕ ಹಾರಿ ಹೋಗಿಬಿಟ್ಟಳು, ಮನೆಯ ಕಡೆಗೆ! ನೀಲ ಆಕಾಶದಲ್ಲಿ ಅವೆರಡೂ ಚಿಟ್ಟೆಗಳು ಜೋಡಿಯಾಗಿ ಹಾರಿ ಹೊರಟಿದ್ದವು. ದಾಸೋಜನಿಗೆ ಅಳು ಬಂತು

ಎಂಥ ಹುಡಿಗಿ ಲೋಲಕ್ಕ! ಆ ಹುಡಗನ್ನ ಹೇಗೆ ಸೋಲಿಸಿಬಿಟ್ಟಳು.

---

## ಕಾಕಿ

ಕಾಕಿ ಆರೇರ ಜಾತಿ. ಅವಳು ಅರಮನೆಯಲ್ಲಿ ದಾಸಿಯಾಗಿ ಸೇರಿ ಕೊಂಡಿದ್ದಳು. ಕಾಕಿಯ ತಂದೆ ಶ್ರೀರಂಗಪಟ್ಟಣದ ಯುದ್ಧದಲ್ಲಿ ಸತ್ತು ಹೋಗಿದ್ದನು. ಕಾಕಿಯ ತಾಯಿ ನಂಜನಗೂಡಿನ ದೇವಸ್ಥಾನದಲ್ಲಿ ಊಳಿಗದ ಕೆಲಸ ಮಾಡಿಕೊಂಡಿದ್ದಳು.

ಇನ್ನು ಉಳಿದವನೆಂದರೆ ಕಾಕಿಯ ಅಣ್ಣ ಸಾಕ. ಅವನಿಗೆ ಟೀಪು ಸುಲ್ತಾನರು ಸ್ವರ್ಗಸ್ಥರಾದ ನಂತರ ಬಹು ಕಷ್ಟವಾಗಿತ್ತು. ಸಾಕನ ತಂದೆಯು ಸುಲ್ತಾನರ ದೇಹದ ಬಳಿಯೆ ಹೋರಾಡಿ ಸತ್ತುಬಿದ್ದಿದ್ದನು. ಕಡೆಗಾಲದ ಆ ಸೆನವು, ತನ್ನ ತಂದೆಯ ರಾಜಭಕ್ತಿ ಮತ್ತು ಸುಲ್ತಾನರ ವಾತ್ಸಲ್ಯ ಇವು ಮರೆಯುವಂತಿರಲಿಲ್ಲ. ಸಾಕನ ಮನೆಗೆ ಜಹಾಪನಾ ಟೀಪುರವರೇ ಸ್ವತಃ ದಯಮಾಡಿಸಿ ರೇಶಿಮೆ ಸಾಕುವ ವಿಧಿ ವಿಧಾನಗಳನ್ನೆಲ್ಲಾ ಹೇಳಿಕೊಟ್ಟಿದ್ದ ಸಂದರ್ಭಗಳನ್ನು ಅವನು ಮರೆಯುವಂತಿರಲಿಲ್ಲ ಏನು ಮಾಡಬೇಕೆಂದರಿಯದಲೆ ದೇಶವೆಲ್ಲಾ ಅಲೆದನು.

ಸೈನ್ಯಕ್ಕೆ ಸೇರೋಣವೆಂದು ಯೋಚಿಸಿದನು. ಆದರೆ ಸೈನ್ಯವೆಲ್ಲಾ ಇಂಗ್ಲಿಷು ಕಮ್ಯಾಂಡ್ ಪದಗಳಿಂದ ತುಂಬಿತ್ತು. ಫ್ರೆಂಚ್ ಪದಗಳು ಎಂದರೆ

ಆವನಿಗೆ ಪ್ರೀತಿ–ಆದರೆ ಫ್ರೆಂಚ್ ಇಲ್ಲ—ಉರ್ದು ಅಲ್ಪ ಸ್ವಲ್ಪ—ಅಲ್ಲದೆ ನಗು ಮೊಗದ ಫ್ರೆಂಚರ ಸುಳಿವು ಸಹ ಇರದೆ ದರ್ಪ ಮಾಡುವ ಇಂಗ್ಲೀಷ್ ಜನರ ವ್ಯವಸ್ಥೆ ಅಂತು ಸೈನ್ಯ ಬೇಡವಾಯಿತು. ಇರಲಾರದಲೆ ಹೋದನು.

ಚಿತ್ರದುರ್ಗದ ಪಾಳೆಯಗಾರರ ಬಳಿಗಾದರೂ ಸೇರೋಣವೆಂದು ಯೋಚಿಸಿದನು. ಹಾಗೆ ಪಾಳೆಯಗಾರರ ಫೌಜು ಸೇರುವ ಮುನ್ನ ತಂಗಿಯಾದ ಕಾಕಡವ್ವೆಯನ್ನು ನೋಡಲು ಬಂದಿದ್ದನು.

ಕಾಕಡವ್ವೆಯೆಂಬುದು ಸುಲ್ತಾನರು ಇಟ್ಟ ಇಂಗಿತದ ಹೆಸರು. ಕಾಕಿಯ ಕಣ್ಣ ನೋಟ ಜಳಜಳ ಉರಿಯುತ್ತಿತ್ತಂತೆ—ಹುಡಿಗಿಯ ಕಣ್ಣುಗಳನ್ನು ಕಂಡು ಸುಲ್ತಾನರು—'ಯಾವ ಸಂಸಾರದ ಕತ್ತಲು ಬೆಳಗಬೇಕೋ ಈ ಮಗಾ—ಏನೇ ಕಾಕಡವ್ವೆ—ನಾವಾ ಕ್ಯಾ ಚೋಕ್ರಿ?..' ಅನ್ನುವ ಹೊತ್ತಿಗೆ ಸಾಕನ ತಂದೆ ಬಂದು—'ಸಚ್, ಜಹಾಪನಾ—ಕಾಕಡವ್ವ! ಸುಲ್ತಾನರ ಆಜ್ಞಾದಂತೆ!' ಕಾಕಡವ್ವ? ಹಾಂ!' ಎಂದು ಹುಡಿಗಿಗೊಂದು ಮುತ್ತು ಕೊಟ್ಟು ಕುದುರೆ ಏರಿ ಹೊರಟರಂತೆ, ಡೌಡಾಡೌಡ ಅಂದು, ಸುಲ್ತಾನರ ಸಂಗಡ ಅವರು ಜೀವಂತರಾಗಿದ್ದಾಗ!

ಅಂದು ಕಾಕಿಯನ್ನು ನೋಡುವದಕ್ಕೆ ಸಾಕ ಬಂದನು ಅರಮನೆಯ ತೋಟ್ಟಿಯೊಂದರಲ್ಲಿ ಅಣ್ಣಾತಂಗಿಯರು ಸೇರಿದರು. ಕಾಕಿ ಆಗಲೇ ಒಂದೊಂದು ಇಂಗ್ಲೀಷ್ ಮಾತಾಡುತ್ತಿದ್ದಳು. ಸಾಕ ಫ್ರೆಂಚ್ ಭಾಷೆ ಮರೆತಿರಲಿಲ್ಲ. ಕಾಕಿ ಮಹಾರಾಣಿಯವರನ್ನೂ ಮಹಾರಾಜರನ್ನೂ ಹೊಗಳುವ ಮಾತುಗಳನ್ನು ಕಲಿತಿದ್ದಳು. ರಾಜಮನೆತನದ ಬಿರುದನ್ನೆಲ್ಲ ಜಬರದಸ್ತಿನಿಂದ ಹೇಳುವುದನ್ನೂ ಸಹ ಕಲಿತಿದ್ದಳು.

'ನಾನು ಬಡಗ ಸೀಮೆಗೆ ಹೋಗಾನ ಅಂದುಕೊಂಡೆ.' ಸಾಕ ಎಂದನು.

'ಯಾಕ? ಅಲ್ಲೆಲ್ಲೂ ಫೌಜೇ ಇರುಲ್ಲ ಇನ್ನು ಮುಂದಕ್ಕೆ!' ಕಾಕಿ ಉತ್ತರವಿತ್ತಳು.

'ಯಾಕ—ಪಾಳೇಗಾರರ ಫೌಜೆಲ್ಲಾ ಏನಾಗುತಾವೆ?'

'ಯಾವೊಂದು ಸಹ ಇರಾಕೂಡದು ಎಂತ ಆಡರೀ ಆಗೈತೆ.'

'ಬಿಡು, ನಾವು ಆರೇರಲ್ಲವಾ! ಹೊರಟೇಬಿಡೂದು ಪಡೂಸೀಮೇಗೆ.'

' ಅಣ್ಣ! ಸಾಕಡೆವ್ವೆ! ತಂಗವ್ವ! ಸಾಕವ್ವೆ! ಅಂತೆಲ್ಲ ಕರೀತಿದ್ದೆ! ಬಿಟ್ಟು ಹೋಗುಲ್ಲ ಅಂತ ಆಣೇಬಾಸೆ ಮಾಡಿದ್ದೆ!—ಈಗ ಹೋಗುತೀನಿ! ಸಾಕಿ, ಅಂಬತೀಯ ? '

' ಏನು ಮಾಡಾನ ? '

' ನನ್ನೊಂದಿಗೇ ಇರು—ಇಂಗ್ಲೀಷೋ ಅದೇನೋ ಅಂತಾರಲ್ಲ ಅದೆಲ್ಲ ಕಲಿ ಗುಡ್ ಡೇ ಅಂತಾರೆ, ಗುಡ್ಮಾರ್ನಿಂಗ್ ಅಂತಾರ, ಕ್ಯಾಟ್, ರ್‍ಯಾಟ್, ಜಂಟಲ್‌ಮ್ಯಾನ್, ಹೈನೆಸ್ ಕ್ವೀನ್ ಹೀಗೇ ಏನೇನೋ ? '

' ಯಾಕಾದರೂ ಕಲೀಬೇಕು ಹೊಸಾ ಹೊಸಾ ಬಾಸೆ ಅರಮನೇಲಿ ? ಎಲ್ಲಾ ಅದೇಕೆ ? ಏನೇ ಸಾಕಡಿ ! '

'ಯಾಕ, ಫೌಜುದಾರನಾದರೆ ಸ್ಟ್ಯಾಂಡ್, ಸಿಟ್, ಟೆಂಷನ್ ಮುಂತಾ ಗೆಲ್ಲಾ ಇಂಗ್ಲೀಷ್‌ಲ್ಲೇ ಹೇಳಬೇಕಲ್ಲವಾ, ಇಲ್ಲಿ ನೋಡು ಹತ್ತಿರ ಬಾ. . . . ಗೊತ್ತಾಯ್ತಾ ! '

' ಹಾಗಿದ್ದರೆ ನೋಡು, ನಿನ್ನ ಮಾತು ಹಿಡಿದಾಡು—ಆವೇಶ ಬಳ ಗಿಟ್ಟುಕೋ; ನಾನೊಂದು ಲಾವಣೀ ಬರೆದಿದೇನೆ ಅದನ್ನೇ ಅಭ್ಯಾಸ ಮಾಡಿಕೋ. ಇಲ್ಲಿ ಅರಮನೇವರೆಲ್ಲ ಯಾವ ಯಾವ ಗುಣ ಹೇಳತಾರೆ, ಆ ಗುಣ ಎಲ್ಲ ಕಟ್ಟಿ ಬರೆದಿದೇನೆ ಸುಲ್ತಾನರ ಮೇಗೆ. '

' ಹಾಗಾದರೆ ಅದು ಸಂದಾದೀಪ ! '

' ಏನಿಲ್ಲ. ನಾನೇ ಬರೆದೆ ಅನ್ನೊ. ಹಳ್ಳೀ ಮಾತೆಲ್ಲಾ ಬಿಟ್ಟು, ಅರ ಮನೆ ಮಾತಾಡು. ನೀನು ಪಟ್ಟಣದ ಲಾವಣಿ ಅನ್ನು; ನಾನು ಪಟ್ಟಣದವರ ಲಾವಣಿ ಹಾಡುತೇನೆ, ನಡುವೆ ನಮ್ಮ ಉಪಾಧ್ಯರು ಇರುತಾರೆ ಅವರೆಲ್ಲ ಸವರಿ ಸರಿಮಾಡುತಾರೆ '

' ಭಯವಾಗುತ್ತೈತಿ ಸತ್ಯ ಪಾಳ್ಯದಾಕ್ಕೆ ಬಂದಂಗೆ ಆಗಹತ್ತಿದೆ ನಂಗೆ'

' ಇಲ್ಲ ಬಿಡೋ ಸಾಕಾ, ಅಲ್ಲದೇನೆ ಪರಂಗಿಯೋರಿದ್ದಾರೆ ಅವರಿಗೆ ಸುದಾ ಕನ್ನಡ ಬರುತ್ತೆ. ಅವರಿಗೆ ನೋಡಪ್ಪ ಎಲ್ಲಾರೂ ಒಂದೇ. ನಮ್ಮ ದೇಶದೋರು ! ಅವರೂ ಎಲ್ಲ ಕೇಳಲಿ. ಆಗ ಎಲ್ಲರೂ ಹೇಳೇಹೇಳುತಾರೆ ! '

' ಏನಂತ ? '

' ಕವಿತಾಕ್ಕೆ ಬಾ. ಸುಲ್ತಾನರ ಬಳಿ ಇದ್ದೋರಿಗೆಲ್ಲಾ ಊಳಿಗ ಸಿಗ

ತಾವಂತೆ ಈಗ. ಪೂರ್ಣಪ್ಪಸ್ವಾಮಿ ಪರ್ದಾನಿಯಾಗಿದಾರೆ. ಅಪ್ಪಂಗೂ, ನಿಂಗೂ ಬಲ್ಲಂಥ ಆ ಸ್ವಾಮಿ, ಪಿರೀತಿ ಮಾಡತಾರೋ ! '

' ಬಿಡುಬಿಡು ಏನು ಕಕ್ಕಲಾತಿ ನಿಂಗೆ ಆಗುಲ್ಲ ನನ್ನಿಂದ ! ' ಹೀಗೆಂದು ಕೊಸರಿಕೊಂಡು ಹೊರಟುಹೋದ ಸಾಕ.

ಹೊಲಿಗೆ, ಕಸೂತಿ, ಹಾಡು, ಹಸೆ, ಕನ್ನಡ, ಮತ್ತು ಇಂಗ್ಲೀಷು ಸಹ ಸ್ವಲ್ಪ ಸ್ವಲ್ಪ ಕಲಿತಳು. ಲಾವಣಿಗಳೆಷ್ಟೋ ಬಾಯಿಗೆ ಬಂದುಬಿಟ್ಟವು. ಚಿಕ್ಕ ಭೂಪರ ಬಿನ್ನಪ ಅವಳ ಹಾಗೆ ಹೇಳುವವರಿರಲಿಲ್ಲ ಸಂಚೀಹೊನ್ನಿ ಎಲ್ಲೀಂದರೆ ಇಲ್ಲಿ ಎಂದು ಅವಳ ಸಾಂಗತ್ಯವೆಲ್ಲ ಹೇಳಿಬಿಡುತ್ತಿದ್ದಳು

ಹೀಗ ಬೆಳೆದಳು ಕಾಕಿ. ಆದರೂ ' ಏನೇ ಸಾಕಿ ಎಲ್ಲಿ ಕಲಿತೆಯೆ ? ' ಅಂದರೆ ' ನನ್ನ ಒಡಹುಟ್ಟಿದಾತ ಇದ್ದಾನಮ್ಮ ಸಾಕ, ಅವಾ ನನಗಿಂತ ಪೂರಾ ಚುರುಕು. ' ಎನ್ನುವಳು ಅಂತು ಅಣ್ಣನನ್ನು ಬಿಟ್ಟುಕೊಡುತ್ತಿರ ಲಿಲ್ಲ.

ಒಂದು ದಿನ ಸಾಕ ಬಂದ. ಬಂದವನೇ ಹೇಳಿದ ' ಈ ವೊಲ್ಲೀಬಳ್ಳಿ ಸಾಕ್ನಿ. ನೋಡು, ನಾನಿರುಲ್ಲ ಈ ದೇಶದಾಗ. '

' ಹೋಗೋದೆಲ್ಲಿ ? ಇರು. ನನ್ನುಪಾಯ ನೋಡು. ನಿಂಗೆ ಮುದ್ದೆ ಎಸರು ಸಿಗುವಂಥಾದ್ದು. '

' ಅದೇನು ನೋಡುವ. ನಾನೂ ಒಗಳೇ ಬಿಡತೇನಿ ಎಲ್ಲಾರಾಂಗೆ ನಿನ್ನ. '

' ನೀ ಓಗು ಹತ್ತುಹದಿನೈದು ಜಿನ ಎಲ್ಲಾರೂ. ಲಾವಣಿ ಏಳಾದು ಹುಣ್ಣಿಮೆ ಬಾರಸಾದು ಕಲಿತು ಬಾ ಮತ್ತೆ. '

' ನಾ ಒಲ್ಲೆ ಆ ಕೆಲ್ಸ. ಸಿಂತ ಸಿಂತಾಗೆ ಏಳಬಲ್ಲೆ ಲಾವಣಿ ! ಆದರೆ ಕುಂತು ಬರೀಲಾರೆ. ಹುಣ್ಣಿಮೆ ಬಾರಿಸಲಾರೆ ನಾಕು ಮಂದಿ ಮುಂದೆ. ನಾ ಒಲ್ಲೆ ಆ ಕೆಲ್ಸ, ಲಾವಣೀ ಹೇಳೋ ಕೆಲ್ಸ. '

' ಕಲೀಲಾ, ತುಸಾ. ಒಂಜಿನ ನಾನೂ ನೀನೂ ಮಾತಾಯೀ ಮುಂದೆ ಹೇಳೋಣಂತೆ. '

' ಹಾಗಿದ್ದರೆ ಯಾವದಾದರೂ ಒಂದು ಕಲಿತೇ ಬರುತೇನೆ ಬುಡು. ಧಾಟಿ ಹೇಳು ಮತ್ತೆ, ಯಾವ ಧಾಟಿ ? '

'ಹೇಳುತ್ತೇನೆ ಯಾರ ಮೇಲೆ ಹೇಳು. ಯಾರ ಮೇಲೆ ಲಾವಣಿ ಹೇಳತಿ?'

'ರುಮಾಲು ಸುತ್ತಿನ ರಂಗದಾಗೆ ನಿಂತಾಂದರೆ ಆವೇಶ ಬರತೈತೆ. ಆಗ ಮಾತ್ರ ಕಷ್ಟ! ಆದರೂ ಪರವಾಯಿಲ್ಲ ಅನ್ನು ಹೇಳತೀನಿ, ಯಾರ ಮೇಲೆ ಅಂಬತೀಯ?—ಇದು ಒಡೇರ ಅರಮನೆ ಹೇಳಿಬಿಡಲಾ? ನೋಡು ಟೀಪು ಸುಲ್ತಾನ್ ಸನ್ನೊಡೆಯ. ಟೀಪುಸುಲ್ತಾನರ ಮೇಲೆ ಹೇಳಿಬಿಡತೀನಿ!'

'ಈ ಹೈದನ ಹಾಡು, ಸುಲ್ತಾನ್ ಲಾವಣಿ, ಒಡೇರ ಗೀತ ಎಲ್ಲ ಚಂದಾಂತ, ಎಲ್ಲ ಅಂಬತಾರೆ ಬಿಡು.'

'ಆಮೇಲೆ?'

'ನಾನೂ ನೀನೂ ಇಲ್ಲೇ.'

'ನಾನೇನಾದರೂ ಕನಸಿನಲ್ಲಿ 'ಸುಲ್ತಾನ್ರೇ, ಜಾಪಣ'—ಅಂತ ಕೂಗಿಬಿಟ್ಟರೆ..'

'ಕೂಗಿಬಿಟ್ಟರೆ! ಅಹಾ ಏನು ಹೇಳಾರು ಮತ್ತೆ, ಹೈದನ ಕರೆಸಿ ತಿಂಡೀ ಕೊಟ್ಟು 'ಲೇ ಮಗಾ, ಈಗಲೇಗ ಒಡೇರ ದವಲತ್ತು ಕಣಲಾ' ಅಂದಾರು. ಅವರಿಗೇ ಹಾಗಂಟಿದೋನು ನಮಗಿನ್ನು ಬಿಟ್ಟಾನಾ ಅಂಟದೇ- ಅಂತಾರೋ!'

'ಹೌದಾ! ಕೆಲಸನಾರ ಏನು?'

'ಓದು! ಬರಿ! ಉಣ್ಣು! ಬೇಕಾದ್ದೆಲ್ಲ ಉಡು, ಕುದುರೇ ಸವಾರಿ ಕಲೀ—ಏನೇನೆಲ್ಲ ಒಳ್ಳೇ ಹರೇದ ಮಕ್ಕಳ ಕೆಲಸ ಅದೇ ಮಾಡುವೀ'

'ಸರಿ! ತಿಳೀತು, ಉಘೇ ಅನ್ನಿಸಿಬಿಡುತೀನಿ ಬಿಡು!'

'ತಾಳ, ರಾಗ, ತುಸಾ ಗತ್ತಿನ ಚಮಕು, ಇಷ್ಟೇ ಸಾಕು, ಹೆಚ್ಚೆಲ್ಲ ಇಲ್ಲೇ ಕಲೀವೆ ಹೋಗು ಮತ್ತೇ'

ನಾಕ ಹೋಗಿ ಬಂದ ಒಂದು ತಿಂಗಳ ಮೇಲೆ ಹೋಗಿ ಬಂದವನು— 'ಉಹೂಂ ನನ್ನಿಂದಾಗುಲ್ಲ. ಪಟ್ಟಣ ಮರೇಲಿಕ್ಕೆ ಮೈಸೂರಿಗೆ ಬಂದಿದ್ದಕ್ಕೆ ಶಿಕ್ಷೆ ಆಯಿತು! ನಾನು ಇಲ್ಲೆಲ್ಲೂ ಇರುಲ್ಲ' ಹೀಗೆಂದು ಕಂಬಳಿ ಹೆಗಲಿಗೆ ಹಾಕಿ ಹೊರಟೇಬಿಟ್ಟ

ಕಾಕಡವ್ವ, ಪುಟ್ಟಾಣೀತಾಯಿ ಕಾಕಿ! ಒಂದು ಉಪಾಯ ಮಾಡಿ

ದಳು ಅಡಿಗೆ-ಶಾಲೆಗೆ ಹೋಗಿ ಒಂದೆರಡು ರೊಟ್ಟಿ, ಒಂದೆರಡು ಕೃಷ್ಣರಾಜ ಗಡ್ಡಿ ಇಸಗೊಂಡು ಬುಟ್ಟಿಯಲ್ಲಿ ಇಟ್ಟು, ಸಂಗಡ ಇನ್ನೇನೋ ಇಟ್ಟು, ತೆಗೆದುಕೊಂಡು ಊರ ಬಾಗಲಲ್ಲಿದ್ದು 'ಸಾಕ! ಮುನಿಬೇಡ ಸಾಕಾ! ಇದಾದರೂ ತೆಗೆದುಕೊಂಡು ಹೋಗು; ಬಿಸಿಲು ಜೋರಾದಾಗ ನೆರಳಲ್ಲಿ ಹೋಗಿ ಬಿಚ್ಚಿ ತಿನ್ನು ಆಮೇಲೆ ನಿಂಗೆ ತಿಳಿದದ್ದು ಮಾಡಣ್ಣ. ನಿನ್ನಿಚ್ಛೆ.'— ಎಂದು ಶರಗಲ್ಲಿ ಕಣ್ಣೊರಸಿಕೊಂಡು ಅರಮನೆಗೆ ಬಂದುಬಿಟ್ಟಳು

ಸಾಕ ಊರು ದಾಟಿ ದೂರ ಹೋಗಿ ಬಿಸಲಲ್ಲಿ ಸೋತು ನೆರಳಲ್ಲಿ ಕುಳಿತು 'ಕಾಕಿ ನೋಡಪ್ಪ, ಪುಟ್ರಾಣಿ ಅಮ್ಮ ಆಗಿಬಿಟ್ಟಿದ್ದಾಳೆ ಏನಂತೆಲ್ಲ ಮಾತಾಡತಾಳಲ್ಲ, ಬಿಚ್ಚಾದರೂ ನೋಡೋಣ, ಅವಳ ಬುಟ್ಟಿ' ಹೀಗೆಂದು ಬಿಚ್ಚಿದ. ತಕ್ಷಣ ಒಳಗಿನಿಂದ ಪಾರಿವಾಳವೊಂದು ಹಾರಿಹೋಯಿತು.

'ಅರರೇ! ಏನು ಮಾಡೋಣ?' ಎಂದು ಕರೆದ, ಓಡಿದ, ಮರ ಹತ್ತಿದ; ಸಿಗಲಿಲ್ಲ ಅದು ಸರಿ ಹಸಿವಲ್ಲವೇ! ಇಳಿದ. ರೊಟ್ಟಿ ಕಿತ್ತು ತಿನ್ನಲಿಕ್ಕೆ ಪ್ರಾರಂಭಿಸಿದ. ಆದರೆ ಕಚ-ಕಚ ಎಂತ ಏನೋ ಸಿಕ್ಕಿತು ಹಲ್ಲಿಗೆಲ್ಲ. ಸರಿಯಾಗಿ ಬಿಚ್ಚಿ ನೋಡಿದರೆ ಪದರದೊಳಗೆ ನೋಡಿದಿಯಾ ಕಾಗದ!

ಅದರಲ್ಲಿ ಬರದಿತ್ತು ಹೀಗೆ: 'ಸಾಕ! ಏನು ಹಸಿವಿನಾತುರವಪ್ಪ ರೊಟ್ಟೀ ತಿನ್ನುವಾಗ ಕಾಗದಾನೂ ತಿಂದೆಗಿಂದೆಗೋ! ಹಕ್ಕಿ ಹಾರಿಬಿಟ್ಟಿತಾ? ಹೋಗಲ ಬಿಡು. ರೊಟ್ಟಿ ಹಿಟ್ಟು ತಿಂದು ದಣಿವೆಲ್ಲ ಆರಿಸಿಕೋ. ಆಮೇಲೆ ಹೇಳುತ್ತೇನೆ..ತಿಂದೆಯಾ! ತಿನ್ನಪ್ಪಾ....' ಕಾಗದ ಅಲ್ಲೇ ಇಟ್ಟು ಸಾಕ ತಿಂಡಿ ತಿಂದ ಕೃಷ್ಣರಾಜಗಡ್ಡಿ ಕೈಲಿ ಹಿಡಿದ. ಒಳಗೇನೋ ಕಳ ಕಳ ಎಂತು. ಕಂಡಿ ಕೊರೆದ ಒಳಗೆ ಅವರೆಕಾಳು ಎಸರು. ಇನ್ನೊಂದರಲ್ಲಿ ಒಳ್ಳೇ ಮೊಸರು. ಎಲ್ಲ ಸೆಗ್ಗಿ ಹೊಡೆದೇಬಿಟ್ಟ ಆಮೇಲೆ ಕಾಗದ ಓದಿಕೊಂಡ. ಅದರಲ್ಲಿ ಹೀಗಿತ್ತು: 'ಸಾಕ, ಹೊಟ್ಟೆ ತುಂಬಿತಾ ಈಗ ಬುಟ್ಟಿ ನೋಡು? ಅದರಲ್ಲಿ ಒಂದು ಬ ಇದೆ ಹಿಟ್ಟು ರೊಟ್ಟಿ ಚೂರು ಆರಿಸಿಟ್ಟು ಅದರ ಮೇಲೆ ಆ ಬಲೆ ಹರಡು. ಪಾರಿವಾಳ ಬರುತ್ತೆ. ಕೂರುತ್ತೆ. ಅದು ತಿಂಡಿ ಎಲ್ಲ ತಿಂದ ಮೇಲೆ ಹಿಡಿದು ಬುಟ್ಟೀಲಿ ಹಾಕ್ಕೊ. ನಿನಗೆ ಯಾವಾಗ ಮನಸ್ಸು ಬರುತ್ತೋ ಆಗ್ಗೆ ಒಂದು ಕಾಗದ ಬರೆದು ಪಾರಿವಾಳದ ಕಾಲಿಗೆ ಕಟ್ಟಿ ಕಳುಹಿಸಿಬಿಡು. ಬುಟ್ಟಿ ಮಾತ್ರ ನಿನ್ನ ಬಳಿ ಇರಲಿ ನಾನೇನಾದರೂ ಪಾರಿವಾಳ

ಕಳಿಸಿದರೆ, ನಿನಗೆ ಅದು ಸಿಗಬೇಕಾದರೆ ಒಟ್ಟಿ, ಒಲೆ ಎರಡೂ ಬೇಕು, ನೋಡು.' ಕಾಗದ ಓದಿಕೊಂಡು ಸಂತೋಷವಾಗಿ ಕುಣಿತು, ಮುಲಗಿ, ಉಪಾಯವಾಗಿ ಹಕ್ಕಿ ಹಿಡಿದು, ಬುಟ್ಟಿ ಹೆಗಲಿಗೆ ಇಟ್ಟು, ಹೊರಟನು.

ಎಲ್ಲೆಲ್ಲೋ ತಿರುಗಿದ ಕಡೆಗೆ ತಂಗಿಯ ಉಪದೇಶದ ಕಡೆ ಮನಸ್ಸು ತಿರುಗಿತು ಪ್ರಸಿದ್ಧ ಲಾವಣಿಕಾರರ ಒಳಿಗೆಲ್ಲ ತಿರುಗಿ ಅಲ್ಲಲ್ಲಿನ ವಿಶೇಷ ರೀತಿಗಳನ್ನೆಲ್ಲಾ ಕಲಿತು, ಶೀಘ್ರಬುದ್ಧಿಯಾಗಿ ಕೈಗ ಧೋಡ ಹಾಕಿಸಿ ಕೊಂಡು ಬಂದುಬಿಡುವ ಪ್ರಯತ್ನ ಮಾಡಿದನು

ಕಾಕಡೆವ್ವ ಅರಮನೆಗೆಲ್ಲ ಅಚ್ಚುಮೆಚ್ಚಿನ ದಾಸಿಯಾಗಿದ್ದಳು. ಇಂಗ್ಲೀಷು, ಕನ್ನಡ, ಸಂಸ್ಕೃತ, ಗಣಿತ, ಲಾವಣಿ ಏನೇನೆಲ್ಲ ಓಟುಕು ವಂತಿತ್ತೋ ಅವೆಲ್ಲ ಕಲಿತಳು.

ಒಂದು ದಿನ ಒಂದು ಪಾರಿವಾಳ ಬಂತು ಅದರ ಕಾಲಲ್ಲಿದ್ದ ಕಾಗದ ದಲ್ಲಿ ಹೀಗಿತ್ತು: 'ಕಾಕಿ! ನಾನು ನಿನಗೆ ದೂರವಾಗಿ ಹೋದರೆ? ಕನ್ನಡ, ಇಂಗ್ಲೀಷು ಎಲ್ಲ ಬಿಟ್ಟು ಭಟ್'ಕಲ್' ಒಳಿ ಗಂಗೆ-ಮಗನಾಗಿ ಏನೀಸು ವ್ಯಾಪಾರಕ್ಕೇನಾದರೂ ನಿಂತರೆ, ಏನು ಮಾಡುತ್ತೀ'' ಇಂಥಾ ಕಾಗದ ಓದಿದ ಮೇಲೆ ಒಂದು ದಿನ ರಾತ್ರಿಯೆಲ್ಲ ಅತ್ತಳು ಒಂದು ದರ್ಬಾರಿಗೆ, ಒಂದು ಉತ್ಸವಕ್ಕೆ, ಹೋಗಲೇ ಇಲ್ಲ ಅರಮನೆಯಲ್ಲೆಲ್ಲ ಗದ್ದಲವಾಗಿ ಹೋಯಿತು ರಾಣಿವಾಸದ ಮಹಾ ಸನ್ನಿಧಾನದಲ್ಲಿ ಸಹ ಅರಿಕೆಯಾಯಿತು. ಅಂತು ಇಂತು ಕಾಕಡೆವ್ವಗೆ ಮಾನ ಮರ್ಯಾದೆಗಳು ಹೆಚ್ಚಿದವು. ಆಕೆಯ ಅಣ್ಣನಿಗೆ ಒಂದು ದವಲತ್ತು ಸಹ ಸಿಗುವ ಏರ್ಪಾಡಾಯಿತು.

ಆಗ ಕಾಕಿ ಏನು ಮಾಡಿದಳು? ಒಂದು ಉಪಾಯ ಮಾಡಿದಳು. ಅದರಿಂದ ಸಾಕ ಬೇಗನೆ ಬರುವಂತೆ ಆಯಿತು

ಸಾಕನಿಗೆ ಪಾರಿವಾಳವು ಒಯ್ದ ಕಾಗದದಲ್ಲಿ ಈ ಒಕ್ಕಣೆ ಇತ್ತು—

'ತಂಗಿ ಕಾಕಿಯ ಶಿರಸಾಷ್ಟಾಂಗ ಶರಣಾರ್ತಿಗಳು—

> ನಿಮ್ಮ ಕಾಗದ ಅರಮನೆಗೆಲ್ಲ ಮುಟ್ಟಿತು. ನೀವು ಬಂದರೆ ಎಲ್ಲ ಕಲಿಕೆಯ ಸಂಗಡ ಕನ್ನಡ ಇಂಗ್ಲೀಷು ಸಹ ಕಲಿಯಬಹುದು ಇಲ್ಲಿ ಈಗ ಪರಂಗಿಯೋರೆಲ್ಲ ಕನ್ನಡ ಕಲಿತುಬಿಟ್ಟಿದ್ದಾರೆ. ಅರಮನೇಲಿ ಎಲ್ಲರಿಗಿಂತ ಇಂಗ್ಲೀಷು ನಂಗೆ ಚೆನ್ನಾಗಿ ಹತ್ತಿದೆ

ಮುಕ್ತರಾದ ಧಣೀರ ಗೀತಗಳೆಲ್ಲ ಕಲಿತು, ಕುಣಿತಕ್ಕೆ ಹಾಕಿಕೊಂಡಿದ್ದೇನೆ—ನೀನು ಬಂದ ಗಿಂದರೆ ನೋಡು, ಯಕ್ಷಗಾನದ ತೊಟ್ಟಿಗೆ ದರೋಗನ್ನ ಮಾಡುತ್ತಾರೆ ಅಲ್ಲೇ ಹರೇದ ಹರಾವನ್ ಸಿಂಗರಾಜ್ ಇದ್ದಾನೆ ಅವನ ತಂಗಿ ತಾರಕ್ಷೀನೂ ಇದ್ದಾಳೆ ಅವನು ಬಂಗಾರ, ಇವಳು ಸೋನಾ. ಅವನೋ ಕಬ್ಬು ಇವರು ಹನಿಜೇನು. ನೋಡಪ್ಪ ಬಂದರೆ ಸರಿ, ಇಲ್ಲವೋ, ಬೇಡ ನೋಡು! ಬಾ, ಬಂದರೋ' ಅವ ನನಗೆ, ಇವಳು ನಿನಗೆ. ಎಲ್ಲರೂ ಅರಮನೆಗೆ ನೆರವಾಗಿ ಇರೋಣಂತೆ—ಇಲ್ಲವೋ! ಹೇಳಿಬಿಡಲಾ? ಅಮ್ಮ ಕಾಗದ ಬರೆಸಿದ್ದಾಳೆ... ನಂಜನಗೂಡು ಗುಡೀಲಿ ಕೆಲಸ ಖಾಲಿಯಂತೆ ಅವಳು ಗೋಮಾ ಹಚ್ಚಿ ಮುಸುರೆ ತೊಳಕೊಂಡಿದ್ದಾಳೆ ನಾನು ಕುಣಕೊಂಡು ಕೊಸರಿಕೊಂಡು ಇರೋಣಂತೆ—ಬರಸಿದ್ದಾಳೆ' ಅಂದರೆ ಬಸವಿ ಆದಂತೆ' ಗೊತ್ತಾ ಸರಿ! ಬೇಗ ಪಾರಿವಾಳ ಕಳಿಸಿ ಬಂದುಬಿಡು. ಇಲ್ಲ! ಬೇಡ! ನೋಡು!'

ಕಾಗದ ಓದಿ ಸಾಕ ಸಂಕಟಪಟ್ಟನು ಆದರೇನು? ಎಲ್ಲಿಗೆ ಹೋದರೂ ಯಾರನ್ನಾದರೂ ಮೆಚ್ಚಿಸಿಬಿಡುವ ಶಕ್ತಿ ಇತ್ತಲ್ಲ! ಸರಿ ಈ ಬಾರಿ ಪಾರಿವಾಳದ ಕಾಲಿಗೆ ಚೀಟಿ ಬರೆದು ಕಟ್ಟಿದನು ಆದರೆ ಅದನ್ನು ಕಳಿಸಲಿಲ್ಲ, ತಾನೇ ಹೊರಟುಬಿಟ್ಟ.

ಒಂದು ದಿವಸ ಬೆಳಿಗ್ಗೆ ಅರಮನೆಯ ಮುಂದೆ ಯಾರೋ ಲಾವಣಿ ಹೇಳಿದ ರಾಗ ಕೇಳಿಸಿತು ಅಪ್ಪಣೆಯಾಯಿತು ದರ್ಬಾರಿಗೆ ಹೋಗಲಿಕ್ಕೆ. ಆ ದಿನ ಸಂಜೆಗೆ ಎಲ್ಲ ಗುಜುಗುಜು. ಆ ಮಹಾ ಜನಸಂದಣಿಯಲ್ಲಿ ಜರೀ ಹೊದ್ದು ಎಳೇ-ಮಿಶೀ-ಗೆಣೆಯ ಜಾಗು ಹಾಕಿ ಬಂದು ನಿಂತು ಮುಜುರೆ ಮಾಡಿದನು ಕೈಲಿದ್ದ ಬುಟ್ಟಿ ಕೆಳಗೆ ಇಟ್ಟು ಹುಣ್ಣಿಮೆ ಶೃತಿಮಾಡಿಕೊಂಡು ರಾಗ ಹೇಳುವುದಕ್ಕೆ ಪ್ರಾರಂಭವಾಯಿತು—ಇಡೀ ಭಾರತದ ಕಥೆಯೆಲ್ಲ ಒಂತು—ಎಲ್ಲ ಭಾಷೆಗಳೂ ಒಂದವು; ಎಲ್ಲ ತಾಳಗಳೂ, ರಾಗಗಳೂ ಮೇಳೈಸಿ ಬಂದವು ಎಲ್ಲರೂ ತಲೆದೂಗಿದರು ಖಾಸಾ ಸನ್ನಿಧಾನದ ಬಳಿಗೆ ಕರೆ ಬಂತು. ಇನ್ನೇನು ನಾಲ್ಕೆಂಟು ಹೆಜ್ಜೆ ಅಷ್ಟೆ, ಆದರೆ ಈ ಘನ ವಿದ್ವಾಂಸ ಗಾಬರಿಪಟ್ಟು ತನ್ನ ಹತ್ತಿರವಿದ್ದ ಬುಟ್ಟಿಯನ್ನ ಎಡವಿ ಉರುಡಿಸಿ, ಅರಸರ ಪೀಠದ ಒಳಿಗೆ ಹೋಗುವ ಆತುರದಲ್ಲಿದ್ದಾಗ್ಗೆ ಬುಟ್ಟಿಯಿಂದ ಏನೋ ಹಾರಿ ಹೋಯಿತು—ಎಲ್ಲರೂ ನೋಡುತ್ತಾ ಇರುವಾಗ್ಗೆ ರಾಣಿವಾಸದ ಜಾಲಂಧ್ರದ ಒಳಿ ಹಾರಾಡಿ ಎಲ್ಲೋ ಕಂಡಿಯಲ್ಲಿ ದೂರಹೋಯಿತು. ಅದೊಂದು

ಬಿಳೀ ಪಾರಿವಾಳ ಏನು ! ಏನೆಂದೆಲ್ಲರೂ ಎದ್ದು ಬಿದ್ದು ನೋಡುವಷ್ಟರಲ್ಲಿ ಮಾಯವಾಯಿತು.

ಇತ್ತ ಶ್ರೀ ಪ್ರಭುಗಳು ಆ ಲಾವಣಿಕಾರನನ್ನ ಆಸ್ಥಾನದಲ್ಲೇ ಇರುವಂತೆ ಹೇಳಿದರೆಂದೂ ಆತನು ಹಗಲು-ದೀವಟಿಗೆಯ ಮರ್ಯಾದೆಗೂ ಸಹ ಒಪ್ಪದೆಲೆ ಹೊರಡುತ್ತಲಿದ್ದನೆಂದೂ ಗುಸಗುಸ ಮಾತನಾಡುತ್ತಿದ್ದರು ಸಭೆಯವರೆಲ್ಲ

ಆಗ ಕೋಲುಕಾರ ಒಬ್ಬ ಬಂದು ಆ ವಿದ್ವಾಂಸನ ಕೈಗೊಂದು ಕೊಳವೆ ಕೊಟ್ಟನು. ಅದರೊಳಗೆ ಕಾಗದದ ಸುರುಳಿ ಇತ್ತು. ಅದನ್ನು ನೋಡಿಕೊಂಡು, ಸ್ವಲ್ಪ ಸಮಾಧಾನಪಟ್ಟುಕೊಂಡು ಆತ ಹೊರಟುಹೋದನಂತೆ ಆತನಾರು........?

ಮಾರನೆಯ ದಿನ ಯಕ್ಷಗಾನದ ತೊಟ್ಟಿಯಲ್ಲಿ ಸಾಕ, ಕಾಕಿಯನ್ನು ಭೆಟ್ಟಿಯಾದನು.

'ಅಬ್ಬ, ಏನು ಜಂಬವಪ್ಪ! ಇವಳಿಗಿಂತ ಚಂದವೇನೋ ನೀನು, ಈ ತಾರಕ್ಕಿಗಿಂತ? ನನಗಿಂತ! ಚೆನ್ನಾಗಿ ಹಾಡುತ್ತೀಯ ನೀನು?' ಎಂದು ಕಾಕಿ ಮೂದಲಿಸಿ ನುಡಿದಳು.

'ಏನೋ ಅಂದು ಬುಟ್ಟಿ ಉರುಡದಿದ್ದರೆ ನೋಡಬೇಕಾಗಿತ್ತು! ನಿನ್ನ ಅಣ್ಣಾ ನಿನ್ನ ಕೈಗೆ ಸಿಗುತ್ತಿದ್ದನೇನೋ.' ಎಂದು ಸಾಕ ಜಂಭಕೊಚ್ಚಿಕೊಂಡ.

'ಪಾರಿವಾಳ ಹಾರಿ ಬರದಿದ್ದರೆ ನೋಡಬೇಕಾಗಿತ್ತು ಕಾಕೀನ. ಗುಡೀ ದಾಸಿಯಾಗಿ, ಅಲ್ಲೀಗಲ್ಲೆ ಕೊಂಡಿಗೆ ಕೊಂಡಿ ! ' ಕಾಕಿ ನಕ್ಕಳು.

ಈ ಸಮಯಕ್ಕೆ ಕರೆ ಬಂದು ಇಬ್ಬರೂ ಸನ್ನಿಧಾನಕ್ಕ ಹೋದರು. ಆಗಿನಿಂದ ಸಾಕ ಅರಮನೆಯಲ್ಲೇ ನಿಲ್ಲುವಂತಾಯಿತು. ತಾರಕ್ಕಿ ಚೆಲುವಿನ ಕುಣಿತ ಕಲಿತು ಸಾಕನಿಗೆ ಒಲವಿನ ಗೆಣತಿಯಾದಳು. ಕಾಕಿ ಯಾವನ್ನ ಮದುವೆಯಾದಳು ?

ಅಂದಿನಿಂದ ಕನ್ನಡ ಕಲಿತವರೆಲ್ಲ ಇಂಗ್ಲೀಷು ಕಲಿಯಲು ಆರಂಭವಾಯಿತು. ಅದುವರೆಗೆ ಕನ್ನಡವೆಲ್ಲ ಬರೀ ಹಾಡಿನ ಹೊನಲಾಗಿತ್ತು. ಹಳಕುಗಳಿಲ್ಲದ ಜೋನಿ ಪಾಕವಾಗಿತ್ತು. ಇಂಗ್ಲೀಷಿನ ಸುಣ್ಣಾ ಬೆರೆತು, ಹೊಸ ಯುಗದ ಜರಡಿಯಲ್ಲಿ ಸೋಸಿ, ಹೊಸ ಭಾವಗಳ ಬಿಸಿಯಲ್ಲಿ ಕಾಸಿ, ಹೊಸ ಸಾಹಿತ್ಯವು ನಿರ್ಮಾಣವಾಯಿತು. ಈಗ ಕಲ್ಲುಸಕ್ಕರೆಯಂಥ ಪದ್ಯದ ಹಳಕು

ಗಳೂ, ಪುಡಿ-ಸಕ್ಕರೆಯಂಥ ಸಣ್ಣ ಕಥೆಯ ಗದ್ಯಗಳೂ, ಬೆಳೆದು ಭಾರತದಲ್ಲಿ ಕನ್ನಡವು ತಲೆಯೆತ್ತುವಂತಾಗಿದೆ.

ಸಂಚಿಯ ಹೊನ್ನಮ್ಮನ ಸಾಂಗತ್ಯಗಳೂ, ಚಿಕ್ಕದೇವರಾಜಬಿನ್ನಪಗಳೂ—ಅವುಗಳ ನಂತರ ಹರಿದು ಬಂದ ಭಾರತ, ರಾಮಾಯಣ ಗದ್ಯಾನುವಾದಗಳೂ ಸಾಕ ಮತ್ತು ಕಾಕಿಯಂಥವರ ವಿದ್ಯಾರ್ಥಿತನಕ್ಕೆ ರಸಕವಳಗಳಾಗಿದ್ದವು.

ಈಗ ಇಂಗ್ಲೀಷಿನೊಡನೆ ಕನ್ನಡವು ಕೂಡಿ ಹರಿದು ಇಂಡಿಯ ದೇಶದ ಇತರ ಭಾಷೆಗಳ ಸಂಗಡ ಸೇರಿ ಒಲಿಯುತ್ತ ಇದೆ. ಪಂಜಾಬಿನ ಐದು ಹೊಳೆಗಳ ಕಾಲುವೆ-ನೀರಿನಂತೆ ಒಂದಕ್ಕೊಂದು ಭಾಷೆಗಳೆಲ್ಲ ಕೂಡಿ ಹರಿದು ಭಾರತದ ನಾಗರೀಕತೆಯನ್ನು ಹೆಚ್ಚಿಸುತ್ತ ಇವೆ. ಹೀಗೆ ಎಲ್ಲಾ ಭಾಷೆಗಳ ಸರಿಸಮಾನ ಎನಿಸುವ ಯೋಗ್ಯತೆಯು ಕನ್ನಡಕ್ಕೆ ಬಂದುದು ಹಿಂದೆ ಶ್ರಮಪಟ್ಟವರ ಫಲವಾಗಿ ಅಲ್ಲವೇ! ಅಂಥ ಶ್ರಮಪಟ್ಟ ಸಾಹಿತಿಗಳ ಪೈಕಿ ಕಾಕಿ ಒಬ್ಬಳು! ಸಾಕ ಇನ್ನೊಬ್ಬನು—ಇಂಥವರು ಎಷ್ಟೋ ಮಂದಿ ದುಡಿದಿದ್ದಾರೆ. ಅಂತು ಮೈಸೂರ ಅರಮನೆಯು ಅಂದಿನಿಂದಲೂ ಸಾಹಿತ್ಯದ ಹಿಮಾಲಯವಾಗಿದೆ. ಸಂಚಿಯ ಹೊನ್ನಮ್ಮನಂಥವರು ಎಷ್ಟು ಮಂದಿ ಇದ್ದರೋ ಯಾರು ಬಲ್ಲರು! ಅವರೆಲ್ಲರೂ ಶ್ರಮಪಟ್ಟು ಹೊಸ ಜನಗಳ ಮತ್ತು ಹೊಸ ಭಾಷೆಗಳ ಪರಿಚಯ ಮಾಡಿಕೊಂಡು, ಅವರ ಪ್ರವಚನಗಳ ಫಲಗಳನ್ನು ನಮಗಾಗಿ ಉಳಿಸಿ ಇಟ್ಟು ಹೋಗಿದ್ದಾರೆ.

ಹೊಸಗನ್ನಡ ಕಾವ್ಯಗಳು ಮತ್ತು ಕಥೆಗಳು ನಿಮಗೆ ರುಚಿಸುವವೆ? ಹಾಗಿದ್ದರೆ ಕಾಕಡವ್ವೆಯಂಥವರಿಗೆ ಶಿರ ಬಾಗಿಸಿರಿ. ಕಾಕಿ, ಸಾಕ ಮತ್ತಿನ್ನೆಷ್ಟೋ ಮಂದಿ ಅಂಥವರೆಲ್ಲ ಶ್ರಮವಹಿಸಿ ಈಗಿನ ನುಣುಪು, ನಾಜೋಕು, ಸರಿ, ಸವಿಗಳು ಕನ್ನಡಕ್ಕೆ ಬರುವಂತೆ ಮಾಡಿದ್ದಾರೆ. ಅಂಥ ನಮ್ಮ ಹಿಂದಿನವರು ನೆಟ್ಟ ಕನ್ನಡ ಮಲ್ಲಿಗೆ ಮತ್ತು ದ್ರಾಕ್ಷಿಬಳ್ಳಿಗಳು ಎಲ್ಲೆಲ್ಲೂ ಹಬ್ಬಿ ಹೆಣೆದುಕೊಂಡಿವೆ, ಕನ್ನಡನಾಡನ್ನೆಲ್ಲ ಒಂದಾಗಿ ಮಾಡಿವೆ, ಕಂಪುಗೂಡಿಸಿವೆ, ಸೊಂಪು ಮೂಡಿಸಿವೆ.

ಅಂಥವರ ನೆನಪಿಗಾಗಿ ಈ ಕತೆ ಬರೆದಿದೆ.

---

# ಗಂಗು

ನಮ್ಮ ಇಸ್ಕೂಲು ನೋಡಿದೀರ? ನಮ್ಮ ಗಂಗುನ? ಆ ದಪ್ಪ ಮೂಗಿನವನು! ನಮ್ಮ ಮೇಸ್ಟ್ರು ಹೆಣ್ಣು ಮೇಸ್ಟ್ರು. ಅವರು ಗೂಡ್ಸು ಗಾಡಿ ಬಂದ ಕೂಡಲೆ ಆಟದ ಗಂಟೆ ಹೊಡಿಸುವರು. ಆಗ ಹೊರಗೆ ಹೋದರೆ ನಾವೆಲ್ಲ ಸೇರಿ ರೈಲಾಟ ಆಡಿ, ಕಡ್ಲೆ ಮಂಡಕ್ಕಿ, ಕೊಪ್ಪರಚೀನಿ, ಕಲ್ಯಾಣ ಸೇವೆ, ಏನಾದರೂ ಒಂದು ತಿಂದು, ಸಾಕು, ಸಾತು, ಗೌರಾ, ಪಾತು ಏನಾದರೂ ತಂದಿದ್ದರೆ ಅದನ್ನೂ ತಿಂದು ಕ್ಲಾಸಿಗೆ ಹೋಗಿ ಮಗ್ಗಿ ಹೇಳಿ, " ಕಾಯಹೌ ಶ್ರೀ " ಹೇಳಿ ಮನೆಗೆ ಹೋಗುವ ಪದ್ಧತಿ ಇತ್ತು. ಹೀಗಿರುವಾಗ ನಮ್ಮ ಇಸ್ಕೂಲಿನ ಗಂಗು—ಅವನೇ ನಮ್ಮ ರೈಲಿಗೆ ಗಾರ್ಡ್— ಒಂದು ದಿನ ಒಂದು ನಾಚಿಕೆಗೇಡಿನ ಕೆಲಸ ಮಾಡಿದನು. ಅದೇ ಗಂಗೂ ವಿಚಾರ. ಜಗಲಿ ಮೇಲೆ ಬನ್ನಿ, ಕುಳಿತುಕೊಳ್ಳಿ. ಈ ಕಥೆ ಕೇಳಿ, ಹೋಗಿ.

ಒಂದು ದಿನ ಕ್ಯಾಲೆಂಡರಲ್ಲಿ ಶನಿವಾರ ಅಂತ ಇತ್ತು. ಪಂಚಾಂಗದಲ್ಲಿ ಗೋಕುಲಾಷ್ಟಮಿ ಅಂತ ಇತ್ತಂತೆ. ನಾವಂತೂ ಇಸ್ಕೂಲಿಗೆ ಹೋಗಿದ್ದೆವು. ಬೆಳಗ್ಗೆ ' ಸ್ವಾಮಿ ದೇವನೆ ' ಆಯ್ತು. ಗೂಡ್ಸುಗಾಡಿ ' ತು, ತೂ, ತೂೂ ' ಎಂತ ಬಂತು. ನಮ್ಮ ಇಸ್ಕೂಲು ಜವಾನ ಪಾಯಸ, ಟಂಟಣಾರ್ ಎಂತ ಗಂಟೆ ಬಾರಿಸಿದ. ನಾವೆಲ್ಲ ಹಾರಿದೆವು ಅಂಗಳಕ್ಕೆ !

ಆಡಿದೆವು, ಕೂಗಿದೆವು, ಕಿರುಚಿದೆವು, ರೈಲು ಕೂಗಿತು, ಟಿಕೆಟ್ಟು ಕೊಟ್ಟರು, ಎಂಜಿನ್ ರಾಮು ತು, ತೂ, ತೂೂ ಎಂತ ಕೂಗಿದ. ಗಾಡಿಗಳಾಗಿದ್ದರೂ ಕೂಡ ನಾವೆಲ್ಲ ಛುಕ್, ಛುಗು, ಛುಕ್, ಛುಗು—ಎಂದೇ ಎಂದೆವು. ಶಬ್ದವೂ, ಓಟವೂ ಎಲ್ಲ ಚೆನ್ನಾಗಿತ್ತು. ಎಲ್ಲಾ ಹೆಣ್ಣು-ಹುಡುಗರೆಲ್ಲಾ ನೋಡಿ ' ಎಂಥಾ ಚೆನ್ನಾಗಿರುತ್ತೆ ನೋಡ್ರಿ ' ಎನ್ನುತ್ತ ಇದ್ದರು. ಇದ್ದಕ್ಕಿದ್ದ ಹಾಗೆ 'ಕಲ್ರಾಶೀ ಸ್ಟೇಷನ್' ಬಂತು. ಕೆಂಪು ಬಾವುಟ ತೋರಿಸೋಕೆ ಗಾರ್ಡೇ ಇಲ್ಲ! ಇಂಜನ್ ಕೂಗೇ ಕೂಗ್ತು! ಗಾರ್ಡ್ ಬರಲಿಲ್ಲ ಇಂಜನ್‌ರಾಮೂಗೆ ಸಿಟ್ಟು ಬಂತು. 'ಬೊಗಳೊ, ನಿಲ್ಲಿಸಬೇಕೇನೋ? ಲೋ ಗಾರ್ಡ್,' 'ಲೇ ಗಂಗೂ!' ಎಂತ ಕಿರುಚಿ ಮತ್ತೆ 'ವಿಶಿಲ್' ಮಾಡಿದ. ಗಾರ್ಡ್ ಬರಲಿಲ್ಲ. ನಾವೆಲ್ಲ ಹಿಂತಿರುಗಿ ನೋಡಿದ್ರೆ ಆ ಪ್ರಾಣಿ ಗಂಗು

ಇಟ್ಟಿಗೇ ರಾಶೀಮೇಲೆ ಕುಕ್ಕರಿಸಿಕೊಂಡಿದ್ದ. ಇಂಜನ್ನು ಮತ್ತೆ ವಿಶಿಲ್ ಮಾಡಿತು ಅವನು ಬರಲಿಲ್ಲ. ಬಾಕಿ ಗಾಡಿಗಳಿಗೋ ಮುಂದೆ ಹೋಗ ಬೇಕೂಂತ ಆತುರ. ಯಾಕೇಂದ್ರೆ, ಗುಲಾಬಿ ಗೇಟ್ ಸ್ಟೇಷನ್ ಹತ್ತಿರ ಪಾತು, ಸಾಕು, ಗೌರಾ ನಿಂತಿದಾರೆ. ಮಡಿಲು ತುಂಬ ಏನೋ ಇರುವ ಹಾಗಿತ್ತು. ಅವರೆಲ್ಲ ಕಾದಿದಾರೆ ಇಷ್ಟರಲ್ಲೊ, ಪಾಯಸಾ ಗಂಟೆ ಹೊಡೆಯೊ ಹೊತ್ತು ಬಂತು. ಎಲ್ಲಾರ ಜೇಬಲ್ಲೂ ಕಾಸುಗಳಿದ್ದವು ರೈಲಾಟ ಆದ ಮೇಲೆ ಪೆಪರ್‌ಮೆಂಟು, ಮಂಡಕ್ಕಿ ತಂದು, ತಿಂದು ಕ್ಲಾಸಿಗೆ ಹೋಗಬೇಕು. ಈ ಗಾರ್ಡು ಗಂಗು ಎಲ್ಲ ತಪ್ಪಿಸ್ತಾನೆ, ಇಂಜಿನ್ ರಾಮು ಸಿಟ್ಟು ಮಾಡಿದ್ದೇ ಮಾಡಿದ್ದು. ಶಿಳ್ಳೆ ಜೇಬಿಗಿಟ್ಟು ಕೂಗಿದ 'ಲೇ! ಮಂಗೂ, ಗಂಗೂ, ದಡಿಯ, ಬರದಿದ್ದರೆ ಅಷ್ಟೇ, ಬಾವುಟಾನಾದರೂ ಬೀಸೋ' ಎಂದ. ಗಂಗು ಬರಲಿಲ್ಲ 'ಕಂಬೀ ಬಿಟ್ಟು ಬನ್ರೋ ಎಲ್ಲಾ' ಎಂದು ರಾಮು ನೆಟ್ಟಗೆ ಇಟ್ಟಿಗೆ ರಾಶೀಗೆ ಹೋದ. ನಾವೂ ಹೋದೆವು. 'ಏನೋ ಅದು ನಿನ್ನಾಟ?' ಎಂದೆವು ಗಂಗು ಮಾತಾಡಲಿಲ್ಲ. ಹೇಗೇಗೋ ಆಗಿದ್ದ. ಕಣ್ಣೆರಡೂ 'ಪಳಪಳಾ' ಅಂತಿದ್ದವು, ಬಾಯಂತೂ 'ಬೆಕೊ ಬೆಕೋ' ಅಂತಿತ್ತು. ಬಲಗೈ ಮೂಗಿಗೆ ಅಂಟಿತ್ತು ಎಡಗೈ ಮಡಿಸಿಕೊಂಡು ಮುಖದ ಸುತ್ತ ತಿರುಗುತ ಇತ್ತು. ಕಾಲೆರಡೂ ಕೂಡ ನೆಟ್ಟರಿಸಿಗೊಂಡಿದ್ದವು. 'ಇದೇನೊ, ಇದೇನೋ ಏನೋ ಇದೂ' ಎಂತ ಕೂಗಿದೆವು. 'ಇದೇನೋ ಬೇರೆ ಆಟ. ಸೀಸೇನು ಟೇಶನ್ ಗಡಿಯಾರವೇನೋ' ಎಂದ ಇಂಜನ್‌ರಾಮು. 'ಓಹೋ! ಗಡಿಯಾರದಾಟವೋ' ಎಂದೆವು ನಾವು. ಆದರೆ ಗಂಗು ಮಾತಾಡಲಿಲ್ಲ. ಕೈ ತಿರುಗುತ ಇತ್ತು. ಬಾಯಿ ಬೆಕೊ ಬೆಕೋ ಅಂತಿತ್ತು. ಕಣ್ಣು ಪಳಫಳಾ ಅಂತಿತ್ತು.

'ಇವನು ಬೇರೆ ಒಂದಾಟ ಹೂಡಿಬಿಟ್ಟ! ಬರುತ ಇದ್ದರೆ ಬಂದು ಎರಡನೆ ಗಾಡಿಯಾಗಿ ಶೆಕ್ಬಾಕ್ಕೊ, ಇಲ್ಲದಿದ್ದರೆ ತೊಲಗು' ಎಂದ ರಾಮು ಕಿರುಚಿದ, ಒದ್ದ, ಎಳೆದ, ಬರಲಿಲ್ಲ ಗಂಗು.

ಆ ಹುಡುಗ ಗಂಗು ಹಾಗೆ ನೆಟ್ಟರಿಸಿಕೊಂಡು ಕುಕ್ಕರಿಸಿದ್ದ. ಗಂಟೆ ಹೊಡೆಯೊ ಹೊತ್ತಾಯ್ತು. ತಿಂಡಿ ಇಲ್ಲದ ಹಾಗಾಯ್ತು. ಹಸಿವು, ಸಿಟ್ಟು, ಹೆದರಿಕೆ, ಎಲ್ಲ ಒಟ್ಟಿಗೆ ಬಂತು ನಮಗೆ. ಹೋದೆವು, ಹೆಣ್ಣುಮೇಷ್ಟರಿಗೆ

ವರದಿ ಒಪ್ಪಿಸಿದೆವು. ಅವರು ಇಟ್ಟಿಗೆ ರಾಶಿಗೆ ಹೋದರು. ನಾವು ಸಾಲಾಗಿ ಎತ್ತರ ನೋಡಿಕೊಂಡು ನಿಂತಿದ್ದೆವು. ಹೆಣ್ಣುಮೇಸ್ಟ್ರು ಹತ್ತಿರ ಹೋದರು. 'ಗಂಗೂ!' ಎಂದರು. ಗಂಗೂ ಮಾತಾಡಲಿಲ್ಲ. ಕಣ್ಣು ಪಿಳಪಿಳಾ ಬಾಯಿ ಬೆಕೊಬೆಕೋ, ಮತ್ತೆ ಕೈ ಎರಡೂ ಕೊಂಡಿಗಳಾಗಿದ್ದವು. ಹೆಣ್ಣು ಮೇಸ್ಟ್ರು 'ಲೇ ಗಂಗೂ, ಏನೋ ಅದೂ, ಲೇ ಕೋಣ ಏಳೋ ಮೇಲಕ್ಕೆ' ಎಂದರು. ಊಹು, ಗಾಡರ್ ಗಂಗೂಗೆ ಏನೋ ಆಗಿಹೋಗಿತ್ತು. ಮೇಸ್ಟ್ರು ಎಲ್ಲಾರನ್ನೂ ಒಳಗೆ ಕಳಿಸಿ, ಮಾಯಸನನ್ನು ಗಂಟೆ ಹೊಡಿ ಎಂದರು. ಇಂಜಿನ್ ರಾಮು ಎಂದ 'ಮೇಡಮ್, ನಾನು ಹೋಗಿ ಡಾಕ್ಟರನ್ನ ಕರೆ ತರಲೆ? ನನ್ನ ಮೂರುಗಾಲಿ ಬೈಸ್ಕಲ್ಲು ಬೇಗ ಹೋಗುತ್ತೆ. ಅದಕ್ಕೆ ದೀಪ ಕೂಡ ಇದೆ ಮೇಡಮ್..' ಎಂದೇ ಎಂದದ್ದೂ, ರಾಮು ಆಸ್ಪತ್ರೆಗೆ ಓಡಿ ಬಿಟ್ಟ.

ಇಷ್ಟು ಹೊತ್ತಿಗೆ ಇಸ್ಕೂಲು ಒಳಗಿಂದ ಸಾಕು ಅಳುತ್ತ ಬಂದಳು. ಬಹಳ ಸಾಧು ಹುಡಿಗಿ. ಅವಳು ಅತ್ತದ್ದು ನೋಡಿ ನಮಗೆಲ್ಲ ಕಣ್ಣಲ್ಲಿ ನೀರು ಬಂತು

ಸಾಕು ಡೆಪ್ಟೀಕಮೀಷನ್ನರ ಮಗಳು. ಅವಳ ಅಳು ನೋಡಿ ನಾವೆಲ್ಲ 'ಯಾಕೇ ಯಾಕಮ್ಮ ಸಾಕು?' ಎಂದೆವು

ಈ ದಡಿಯ ಗಂಗು ಹೀಗೆ ಕೂತುಬಿಟ್ಟ, ಆಟ ಕೆಡಿಸಿಬಿಟ್ಟ, ಈ ಸಾಕು ಹೀಗೆ ಅಳುತ್ತಾಳೆ. ಏನಪ್ಪ ಈ ದಿವಸ ಹೀಗಾಯ್ತಲ್ಲ, ಎಂದು ಎಲ್ಲರು ಸಿಡಿ ಮಿಡಿಗುಟ್ಟಿಚಿಟ್ಟಹರಳಾದೆವು. ಹೆಣ್ಮೇಸ್ಟರಿಗೆ ಅರೆದು ಕುಡಿಸಿದ ಹಾಗಾಗಿತ್ತು.

ಸಾಕು ಕಣ್ಣು ಕೆಂಚಗಿತ್ತು ಗೋಲಿ-ಪೆಪರುಮೆಂಟಿನ ಹಾಗೆ. ಗಲ್ಲ ಬೆಳ್ಳಗಾಗಿತ್ತು ಬತ್ತಾಸಿನ ಹಾಗೆ ನಾವೆಲ್ಲ ಕಾದ ಹಂಚಿನಲ್ಲಿ ಕಡಲೇ ಕಾಳಿನ ಹಾಗಾಗಿ, ಸಾಕೂನ ಸುತ್ತಿಗೊಂಡೆವು. ಹೆಣ್ಮೇಸ್ಟರು 'ಯಾಕಮ್ಮ ಸಖೂಬಾಯಿ? ಏನಾದರೂ ಕಳಕೊಂಡೆಯ?' ಎಂದರು. ಸಾಕು ಬಿಕ್ಕಿ ಬಿಕ್ಕಳಿಸಿ ಹೇಳಿದಳು. 'ನೋಡಿ, ಮೇಡಮ್, ನನ್ನ ಗಡಿಯಾರ ಇಲ್ಲವೇ ಇಲ್ಲ. ನಮ್ಮ ಅಮ್ಮಂದು, ಉಂಗುರದ ಗಡಿಯಾರ, ಚಿನ್ನದ್ದು! ಅದರಲ್ಲಿ ವಜ್ರ ಕೆಂಪು ಇತ್ತು, ಇಷ್ಟೇ ಪುಟ್ಟಗು ಮೇಡಮ್, ಎಲ್ಲಾ ಹುಡಿಕಿದೆ, ನನ್ನ ಮಡಿಲಾಗೆ ಕೂಡ ಇಲ್ಲ ನೋಡಿ' 'ಅಯ್ಯೋ! ಪಾಪ ಕಣೆ, ಏನು

ಮಾಡೋಣೆ, ಸಾಕು, ನಾವೆಲ್ಲ ನಿಮ್ಮಮ್ಮನ ಹತ್ತಿರ ಬಂದು ಹೇಳ್ತೀವೆ ಕಣೆ ಸಾಕೂದು ಏನೂ ತಪ್ಪಿಲ್ಲಂತ ಅಳಬೇಡ ಕಣೆ ' ಎಂದೆವು. ಮೇಡಮ್ ಅಂದರು 'ಪಾಯಸಾ, ಸ್ಕೂಲೆಲ್ಲ ಹುಡಿಕಿ ನೋಡೊ; ಈ ಹುಡುಗರ ಜೇಬೆಲ್ಲ ಹುಡಕೊ.' ಅವನು ನಮ್ಮನ್ನು ಕೇಳುವುದಕ್ಕೆ ಮುಂಚೆ ನಾವು' ನಾವೇ ಜೇಬು ಒಳಹೊರಗು ಮಾಡಿ ತೋರಿಸಿದೆವು. ಎಲ್ಲೂ ಇರಲಿಲ್ಲ ಗಡಿಯಾರ.

ಗಂಗೂದು ಒಂದವಸ್ಥೆ ಸಾಕೂದು ಒಂದು ಸಂಕಟ. ನಮಗೆಲ್ಲ ಆ ದಿನ ಹೇಗಾಗಿತ್ತೊ !

ಇಂಜಿನ್‌ರಾಮು ಗಂಟೆ ಬಾರಿಸಿಗೊಂಡು ಓಡ; ಬೈಸ್ಕಲ್ಲು ಇಳಿದ. ಅಷ್ಟು ಹೊತ್ತಿಗೆ ಡಾಕ್ಟರೂ ಒಂದರು ಬಂದ ಡಾಕ್ಟರು, ಮೇಡಮ್ಮನ ಮಾತಾಡಿಸಿ, ಇಟ್ಟಿಗೆ ರಾಶೀ ಹತ್ತಿರ ಹೋಗಿ ಗಂಗೂನ ಈಚೆಗೆ ಎಳೆದು ಕೊಂಡರು. ಬಳ್ಳಿಬಳ್ಳೀ ಹಾಗೆ ಇದ್ದ ಏನೋ ಒಂದನ್ನು ಅಲ್ಲಿ ಇಲ್ಲಿ ಇಟ್ಟು ನೋಡಿದರು. ' ಈ ಹುಡುಗನಿಗೆ ಎರಡು ಹೃದಯವಾಗಿರುವ ಹಾಗಿದೆ. ಎರಡು ಕಡೆ ಕಟ್‌ಕಟಾ, ಡಕ್‌ಡಕಾ, ಎನ್ನುತ್ತೆ ' ಎಂದರು ಮೇಡಮ್ಮನ ಹತ್ತಿರ ಕರೆದು ಏನೋ ಹೇಳಿದರು

ಸಾಕೂಗೆ ಡಾಕ್ಟರದ್ದು ಬಹಳ ಗುರುತು. ಎಲ್ಲಿಯೋ ಇದ್ದವಳು ಓಡಿಬಂದು ' ಡಾಕ್ಟ್ರೇ, ನಮ್ಮಮ್ಮಂದು ಉಂಗುರ-ಗಡಿಯಾರ ಎಲ್ಲೋ ಹೋಗಿದೆ ಯಾರೋ ಕದ್ದಿದ್ದಾರೆ ಡಾಕ್ಟ್ರೇ ' ಎಂದು ಅವರನ್ನು ತಬ್ಬಿ ಕೊಂಡು ಅತ್ತಳು ' ತಾಳಮ್ಮ ತಾಳು ' ಎಂದು ಡಾಕ್ಟರು ಮತ್ತೆ ರಬ್ಬರು ಬಳ್ಳಿ ಇಟ್ಟು ನೋಡಿದರು. ನಕ್ಕರು ' ಲೇ ಮಂಗಣ್ಣಾ, ಪಾತಾಳಾ ನೋಡೋ ' ಎಂದು ತಲೆ ಬಗ್ಗಿಸಿ ಕತ್ತಮೇಲೆ ಒಂದೇಟು ಕೊಟ್ಟರು ಗಂಗೂಗೆ.

ಗಂಗು ಬಾಯಿಂದ ಏನೋ ಗೊಳಕ್‌ನೆ ಬಿತ್ತು ಗಂಗು ಕಣ್ಣು ಬಿಟ್ಟನು. ' ನನ್ನ ಉಂಗರದ ಗಡಿಯಾರ ! ' ಎಂದು ಸಾಕು ಕೂಗಿದಳು

ನಾವೆಲ್ಲ ಬಿದ್ದುಬಿದ್ದು ನಕ್ಕೆವು ಅಂದಿನಿಂದ ಇಲ್ಲೀವರೆಗೆ ನಮ್ಮ ಇಸ್ಕೂಲಲ್ಲಿ ಒಂದು ಬಳಪ ಕೂಡ ಕಳೆದು ಹೋಗಿಲ್ಲ.

ಗಂಗೂಗೂ ಸಾಕೂಗೂ ನಿನ್ನೆ ತಾನೆ ರಾಜಿಯಾಯಿತು.

——

## ಅರಸನ ಬೇನೆ

ಅರಮನೆಯಲ್ಲೆಲ್ಲ ಬಲು ಗದ್ದಲ. ಅರಸನಿಗೆ ಖಾಯಿಲೆ. ವೈದ್ಯರು ಬಂದರು ಒಂದರು. ಒಂದು ಸಾವಿರ ಜನ ಬಂದರು. ಹತ್ತು ಇಪ್ಪತ್ತು ಜನ ಗುಂಪಾಗಿ ಬರೋರು; ಬಂದು ಒಬ್ಬರು ಕಾಲು ಮುಟ್ಟಿ ನೋಡೋದು, ಇನ್ನೊಬ್ಬರು, ಕೈಹಿಸಿಕಿ ನೋಡೋದು, ಎದೇ ಮುಟ್ಟಿ ನೋಡೋದು, ನಾಲಿಗೆ ನೀಡಿಸಿ ನೋಡೋದು, ಕಣ್ಣು-ರೆಪ್ಪೆ ಎಳೆದು ನೋಡೋದು ಹೀಗೆಲ್ಲಾ ಒಲು ಧರವಾಗಿ, ನೋಡಿದರು. ಕೆಲವರು 'ಇವನಿಗೇನು ಕೇಡು ಬಂತು, ಹೀಗೆ ಬಿದ್ದುಕೊಂಡಿದಾನೆ,' ಮತ್ತೆ ಕೆಲವರು, 'ಖಾಯಿಲೆ ಖಸಾಲೆ ಏನೂ ಇಲ್ಲ' ಮತೂ, ಒಂದೆರಡು ಜನ, 'ರಾಜಮನೆತನದವರ ವಿಚಾರ ವಲ್ಲವೆ? ನಮಗೆ, ನಿಮಗೆ, ಬರುವಂಥಾ ಕಾಯಿಲೆ ಇವರಿಗೆ ಬರುತ್ತದೆಯೇ! ಚರಕನ ಪುಸ್ತಕವನ್ನು ತಿರುವಿಹಾಕಿ ನೋಡೋಣ ಅದುವರೆವಿಗೆ, ಯಾವು. ದಾದರೂ, ಒಂದು ಕುಪ್ಪಿ ಮಾತ್ರೆಯನ್ನು ಕೊಟ್ಟರಾಯಿತು' ಎಂತ ಹೀಗೆಲ್ಲಾ ಮಾತಾಡಿಕೊಂಡರು.

ಅರಸನಾದರೋ, ಒಂದೆರಡು ದಿನ ನೋಡಿದನು. ಖಾಯಿಲೆ ವಾಸಿ ಯಾಗಲಿಲ್ಲ ಅದುವರೆಗೆ ಔಷಧ ಪತ್ಯಮಾಡಿ, ಕೊಟ್ಟವರನ್ನೆಲ್ಲಾ ಕೊಲ್ಲಿಸಿ ದನು. ಇನ್ನೂ ಒಂದಿಷ್ಟು ಜನ ವೈದ್ಯರಿಗೆ ಹೇಳಿಕಳುಹಿಸಿದನು. ಮಂತ್ರಿಯು ಅಪ್ಪಣೆ ಮಾಡಿ ವೈದ್ಯಶಾಲೆಗೆ ಹೇಳಿಕಳುಹಿಸಿದನು. ಪರರಾಜ್ಯಗಳಿಗೂ ಹೇಳಿ ಕಳುಹಿಸಿದರು.

'ಆದರೆ, ಖಾಯಲೆಯಾಗಿದೆಯೆ ಅರಸನಿಗೆ? ನಮ್ಮ ನಿಮ್ಮಲ್ಲೇ

ವಿಚಾರ ಮಾಡೋಣ ಅಲ್ಲಿ ನೋಡಿ ಅರಸನನ್ನು ಕಣ್ಣಿನ ಕಾಂತಿ ಕಡಿಮೆ
ಯಾಗಿಲ್ಲ. ಗಲ್ಲದ ಕೆಂಪು ಕಂದಿಲ್ಲ ತುಟಿಗಳ ಮೆರಗು ಹೋಗಿಲ್ಲ ಕೈ
ಕಾಲು ಸೊರಗಿಲ್ಲ. ಊಟದಲ್ಲಿ ಕಡಿಮೆಯಾಗಿಲ್ಲ. ನಿದ್ರೆಯಲ್ಲಿ ಅವನ್ನ ಬಿಟ್ಟರೆ
ಇನ್ನಿಲ್ಲ ಖಾಯಿಲೆ ಇನ್ನೆಂಥಾದ್ದು ?' ಹೀಗೆ ಊರ ಜನರೆಲ್ಲಾ ಮಾತನಾಡಿ
ಕೊಂಡರು. 'ಇಷ್ಟರ ಮೇಲೆ ಆತನು ಅರಸ, ನಾವು ಪ್ರಜೆಗಳು. ಅವನ
ವಿಚಾರ ನಮಗೇನು ಗೊತ್ತು ?' ಎಂತ ಎಲ್ಲರೂ ಸುಮ್ಮನಾದರು.

ಅರಸಿನ ಅರಿಯದ ಖಾಯಿಲೆಗೆ, ಸಾವಿರಾರು ಮಂದಿ ವೈದ್ಯರು ಸತ್ತು
ಹೋದರು. ಕಟ್ಟಕಡೆಗೆ ಇಬ್ಬರು ಮಂದಿ ವೈದ್ಯರು ಬಂದರು. ಎಂದಿನಂತೆ
ಅರಸನು ಅವರನ್ನು ಕರೆಯಿಸಿಕೊಂಡನು. ವೈದ್ಯರಿಬ್ಬರೂ ಗಟ್ಟಿಗರೇ ಸರಿ
ಅವರಲ್ಲಿ ಒಬ್ಬನು ತೆಳ್ಳಗೆ ಸೊರಗಿಕೊಂಡಿದ್ದಾನೆ. ಆತನು ಓದದೇ ಇದ್ದ
ಪುಸ್ತಕವೇ ಇಲ್ಲ ಆ ಓದಿನ ಗದ್ದಲದಲ್ಲಿ, ಅವನು ಊಟ ತಿಂಡಿ ಇವು
ಗಳನ್ನೇ ಮರೆತುಬಿಟ್ಟಿದ್ದನು. ಇನ್ನೊಬ್ಬನು ಸುಖವಾಗಿ ಕಾಲಕಳೆದುಕೊಂಡಿ
ದ್ದನು. ರೋಗಿಗಳು, ಬೇಡವೆಂದರೂ, ಅವನಲ್ಲಿಗೆ ನುಗ್ಗಿ ಬರುವರು ಅವನು
ಕೊಟ್ಟಿದ್ದನ್ನು ಕುಡಿಯುವರು. ಬದುಕಿದರೆ ಬೇಕಾದಷ್ಟು ಪುರಸ್ಕಾರ
ಮಾಡುವರು ಇಲ್ಲ, ಅವರ ಆಯುಸ್ಸು, ತೀರಿತೇ ಅವರ ಕಡೆಯವರಿಂದ
ಅವರ ಹೇಳಿದ್ದರ ಎರಡಷ್ಟನ್ನು ತೆಗೆದುಕೊಳ್ಳುವನು. ಇಂಥಾ ಇಬ್ಬರು
ವೈದ್ಯರೂ, ಮುಂದೆ ಬಂದು, ಅರಸರ ಎದೆಗೆ ಕಿವಿಗೊಟ್ಟು ಕೇಳಿದರು. ನಾಡಿ
ಯನ್ನು ಹಿಡಿದು ನೋಡಿದರು. ಮತ್ತೆಯೂ ನಾಡಿಯನ್ನು ಹಿಡಿದು ನೋಡಿ
ದರು ನಾಲಿಗೆಯನ್ನು ನೋಡಿದರು. ದಿಕ್ಕುತೋಚದೆ ನಿಂತರು. ಸಣಕಲೆ
ಯಾಗಿ ಬಹಳ ಓದಿದ್ದ ವೈದ್ಯರು ಖಾಯಿಲೆ ಯಾವುದೂ ಇಲ್ಲವೆಂದನು.
ರಾಜನಿಗೆ ಸಿಟ್ಟು ಬಂತು. ರಾಜರ ಕೋಪ, ಕೇಳಬೇಕ !—ಕಾಡುಕಿಚ್ಚು —
'ಈ ಧೂರ್ತನನ್ನು ಹಾಕಿ ಗಲ್ಲಿಗೆ' ಎಂದು ಕೂಗಾಡಿದನು. ಸಿಪಾಯಿಗಳು
ಬಂದು, ಮುದಿವೈದ್ಯನಿಗೆ ಹಿಂಗಟ್ಟುಮುರಿಗಟ್ಟಿ, ಸೆಳೆದುಕೊಂಡು ಹೋದರು.

ಬಂದಿತಲ್ಲಪ್ಪ ಕಷ್ಟ ಉಳಿದ ಇನ್ನೊಬ್ಬನಿಗೆ ! ಅವನೋ ನಡುಗುತ್ತ
ಹಿಂದು ಹಿಂದಕ್ಕೆ ಸರಿದನು. ರಾಜನು ಬಿಟ್ಟಾನೆ ? 'ಎಲ್ಲಿ ನೀನೇನು ಬೊಗ
ಳುತ್ತಿ ?' ಎಂದು ಗದರಿಸಿದನು. ವೈದ್ಯನು 'ಬಡ ಕೈ ಕಾಲುಗಳೇ
ನಡುಗಬೇಡಿರಿ, ಸ್ವಲ್ಪ ಸಿಥಾಸಿಸಿ,' ಎಂದು ಹೇಳಿಕೊಂಡು, ತಲೆಯನ್ನು

ತಗ್ಗಿಸಿದನು. ಏನೋ ಯೋಚನೆ ಬಂತು! ಒಂದು ಕಾಗದದ ಚೂರನ್ನು ತೆಗೆದುಕೊಂಡು, ಏನೇನೋ ಬರೆದುಕೊಟ್ಟನು.

ರಾಜನು ಓದಿಕೊಂಡನು. ಅದರಲ್ಲಿ ಹೀಗೆ ಬರೆದಿತ್ತು. 'ಅರಸರೇ! ತಮಗೆ ಬಂದಿರುವ ಬೇನೆಯು ಬಲು ಕಠಿಣತರವಾದದ್ದು. ಇದಕ್ಕೆ ಚರಕ ಶುಶ್ರುತದಲ್ಲಿ ಮದ್ದು ಹೇಳಿಲ್ಲ. ಇನ್ನೊಂದರಲ್ಲಿ ಹೀಗೆ ಹೇಳಿದೆ: ಇಂಥಾ ಕಾಯಿಲೆಯು, ಅರಸರಿಗೇ ಸರಿ ಬರುವುದು. ಅರಸರು ಒಂದು ರಾತ್ರಿ ಮಾತ್ರಕ್ಕೆ ಎಂದೆಂದೂ ದುಃಖವನ್ನೇ ಕಾಣದೆ ಇರುವವನ ಕಂಬಳಿಯನ್ನು ಹೊದ್ದು ಮಲಗಬೇಕು. ಹಾಗಾದರೇ ಸರಿ, ಖಾಯಿಲೆ ವಾಸಿಯಾಗುವುದು.

ಸರಿ, ಹುಡುಕುವುದಕ್ಕೆ ಪ್ರಾರಂಭ! ಇದುವರೆಗೂ ವೈದ್ಯರನ್ನು ಹುಡುಕಿದ್ದಾಯ್ತು, ಇನ್ನು ಔಷಧಿಯನ್ನು! ರಾಜನ ಕೆಲಸಕ್ಕೇನು, ಜನ ಕಡಿಮೆಯೇ? ಹೊರಟರು, ಹೊರಟರು, ನೂರಾರು ಜನ ಕುದುರೆಯ ಮೇಲೆ ದೌಡಾದೌಡಿ, ಹೊರಟರು ರಾಜ್ಯವೆಲ್ಲಾ ಹುಡುಕಿದರು

ಬಡವರು, ಈ ಹೊತ್ತಿಗಿದ್ದರೆ, ನಾಳೆಗಿಲ್ಲದವರು ಉಡುವುದಕ್ಕಿದ್ದರೆ, ಹೊದೆಯುವುದಕ್ಕಿಲ್ಲದವರು ಅಂಥ ದುಃಖದಲ್ಲಿ ಮುಳುಗಿರುವವರಿಗೆ ಸುಖ ವೆಲ್ಲಿಯದು? ಇದ್ದರೆ ಐಶ್ವರ್ಯವಂತರಲ್ಲಿ ಇರಬೇಕು. ಹೀಗೆಂದುಕೊಂಡು ಸವಾರರು ಮುಂದಕ್ಕೆ ಹೊರಟರು. ರಾಜನಿಗಾದರೋ, ನಿತ್ಯ ವರ್ತಮಾನ ಬರುತ್ತಿತ್ತು.

ಕೃಷ್ಣೇ ಅರಸರು, ಬಲು ಭಾಗ್ಯವಂತರು ಆದರೆ, ಅವರ ಖಾಸಾ ಮಗಳು ತೀರಿಹೋಗಿ, ಇನ್ನೂ ಹತ್ತು ದಿನಗಳಾಗಿಲ್ಲ ಅವರನ್ನು ಮಾತ ನಾಡಿಸುವ ಹಾಗಿಲ್ಲ. ರಹೀಂ ಸಾಹೇಬರ ಕಂಬಳಿ ಆಗಬಹುದೋ? ಅದ ಕ್ಕೇನು! ಔಷಧಿಯ ಹಾಗೆ ಹೊದೆಯುವುದಕ್ಕೆ, ಕೇಳಿನೋಡಿ! ಅವರ ಕಣ್ಣೀರು ನಿಲ್ಲುವಹಾಗಿಲ್ಲ. ಅವರದೊಂದು ನವಿಲು ಸತ್ತುಹೊಯಿತಂತೆ. ರಾಮೇಗೌಡರು ತಲೇ ಎತ್ತುವಹಾಗಿಲ್ಲ. ಅವರ ಮನೇ ದನಗಳನ್ನೆಲ್ಲಾ ಹುಲಿ ಹಿಡಿದಿದೆ! ಅಳುವ ಕೂಸಿಗೆ ಸುದಾ ಹಾಲಿಲ್ಲ! ಹೀಗೆ ಬಂದಲ್ಲಾ ಮತ್ತೊಂದು ಕಷ್ಟ. ಅಂತೂ ಇಂತೂ, ಅರಸರಿಗೆ ಔಷಧಿ, ಸಿಕ್ಕದಂತಾ ಯಿತು.

ಕಟ್ಟಕಡೆಗೆ ನೋಡಿಬಿಡೋಣವೆಂದು, ಐದಾರು ಕುದುರೆಯ ಮೇಲೆ

ರಾಹುತರು ತೇಗುತ್ತಾ ಬರುತ್ತಿರುವಾಗ್ಗೆ, ಒಂದು ಊರಿನ ಮಾರೀ ಗುಡಿಯ ಮುಂದೆ ಮೈದಾನದಲ್ಲಿ ಹುಲ್ಲುಕಡ್ಡಿಯನ್ನಗಿಯುತ್ತಾ ಒಬ್ಬನು ಮಲಗಿದ್ದನು. ಅವನ ಮುಖದಲ್ಲೋ, ಆನಂದವು ಉಕ್ಕುತ್ತಲಿತ್ತು ! ತುಂಡಾಂಡಿಯಾಗಿ ಸಿಳ್ಳುಹಾಕುತ್ತಾ, ಚಪ್ಪಾಳೆ ಬಡಿಯುತ್ತಾ ಮಲಗಿದ್ದನು ಅವನಿಗೆ ತೃಣಮಾತ್ರದಷ್ಟೂ ದುಃಖ ಕೊರತೆ ಯಾವವೂ ಇರಲೇ ಇಲ್ಲ

ರಾಹುತರು ಕುದುರೆಯನ್ನು ನಿಲ್ಲಿಸಿದರು: 'ಅಣ್ಣಾ ಇದ್ದ್ಯಾಕಣ್ಣಾ ! ಹೀಂಗೆ ಇದ್ದೀಯ ?' ಎಂದರು. 'ಇನ್ನೇಂಗೆ ಮತ್ತೆ ! ಕೂತ್ಕೊಂಡು ಗಳಗಳ ಆಳ್ತ ನಮ್ಮ ರಾಜರಾಂಗೆ!' ಎಂದು ಹೇಳಿ ಹೊರಳಾಡಿ ನಕ್ಕನು ಈ ಮಾತಿನಿಂದ ಆವರು ಬಹಳ ಸಂತೋಷಪಟ್ಟರು ಇನ್ನೇನು ರಾಜರಿಗೆ ಬೇಕಾದ್ದು ಇಲ್ಲಿ ಸಿಕ್ಕಿತೆಂದು ಹೇಳಿದರು.— 'ಅಪ್ಪ ಆನಂದಪ್ಪ! ನೀ ಹೊದಿಯೋ ಕಂಬ್ಳೀ ಕೊಟ್ಟೀಯೋ ? ಒಂದಿನ್ನೂರ್ರೂಪಾಯಿಯಾದರೂ ಕೊಟ್ಟೇವು! ಒಂದು ರಾತ್ರಿ ಮಾತ್ರ ಕೊಡಣ್ಣ ' ಹೀಗೆ ಅಂಗಲಾಚಿ ಬೇಡಿಕೊಂಡರು. ಕೇಳುವವರೆಗೂ ಕೇಳುತ್ತಿದ್ದು ಆನಂತರ ಆ ಪೋಲಿಯು ಚಪ್ಪಾಳೆಯನ್ನು ತಟ್ಟಿ ನಗುತ್ತಾ 'ಅದ್ಯಾಕಾ ?' ಎಂದನು. ರಾಹುತರು ಹೇಳಿದರು. 'ನಮ್ಮ ಅರಸರಿಗೆ ಬೇನೆ ಬಂದಿದೆ, ಆ ನಿನ್ನ ಕಂಬಳಿಯನ್ನು ಹೊದ್ದುಕೊಂಡರೆ ಹೋಗುತ್ತಂತೆ.' ಪೋಲಿಯು 'ಇಷ್ಟೆಲ್ಲಾ ಮಾಡೋರಿಗೆ, ರಾಜ್ಯ ಆಳೋರಿಗೆ, ಇಷ್ಟೂ ತಿಳಿಲಿಲ್ವಾ!' ಎಂದು ಹೇಳಿ ಹೊರಳಾಡುತ್ತಾ ನಕ್ಕನು. ರಾಹುತರು ಏನೂ ತಿಳಿಯಲಾರದೆ 'ಅದೇನಣ್ಣಯ್ಯಾ ಹೇಳು ನೋಡೋಣ' ಎನ್ನುತ್ತಲೆ 'ನನ್ನ ಹತ್ತಿರ ಕಂಬಳಿಯಿಲ್ಲ ಅನ್ನೋದು' ಎಂದು ಮತ್ತೆ ನಕ್ಕನು

ಮಾರೀಗುಡಿಯ ಮುಂದಣ ಹುಲ್ಲೆಲ್ಲಾ ಮುರಿದು ಮೆತ್ತಗಾದವು... ಹೊರಳಿದನು.

* * * * *

ಈ ವಿಚಾರವೆಲ್ಲಾ ರಾಜನಿಗೆ ತಿಳಿಯಿತು. ಆತನ ಬೇನೆಯ ಗುಟ್ಟು ಆತನಿಗೆ ಗೊತ್ತಾಯಿತು. ತನ್ನ ಕೆಲಸ ತಾನು ಮಾಡಿಕೊಳ್ಳುತ್ತಾ ಬಂದನು. ರಾಜ್ಯವು ಸುಭಿಕ್ಷವಾಯಿತು. ಅರಸನಿಗೆ ಖಾಯಿಲೆಯು ದೂರವಾಯಿತು.

---

# ಚಿಂತಾಮಣಿ

‘ಮಣಿ’ ಎಂದರೆ ಚಿಂತಾಮಣಿ ‘ಚಿಂತು’ ಎಂದರೂ ಅದೇ ಹೆಸರು. ಹಾಗೂ ಕರೆಯುವದುಂಟು; ಹೀಗೂ ಕರೆಯುವದುಂಟು. ಚೆನ್ನಾಗಿದೆಯಲ್ಲವೆ ಆ ಹೆಸರು! ನಿನಗೇನಾದರು ಆ ಹೆಸರನ್ನು ಇಟ್ಟುಕೊಳ್ಳಬೇಕೆಂದು ಆಸೆಯು ಆದೀತು! ಜೋಕೆ!

ಚಿಂತಾಮಣಿ ಎಂದರೆ ಅದೇ ಹುಡುಗ ಇನ್ನಾರೂ ಅಲ್ಲ.

ಒಳ್ಳೆಯ ಹೆಸರೇನೊ ಇಟ್ಟರು. ಆ ಹೆಸರಿಗೆ ತಕ್ಕಂತೆ ಆತನೂ ಬುದ್ಧಿವಂತ. ಎಷ್ಟಾದರೇನು ಇಸ್ಕೂಲಿಗೆ ಹೋಗಿ ಕೈಕಟ್ಟಿ ಕುಳಿತು, ಮರಳಕ್ಷರ ತಿದ್ದಿ, ಮೇಸ್ಟರ ಕಣ್ಣಬೆದರಿಕೆಯಲ್ಲಿ ಬೆಳೆಯಬೇಕು. ಚಿಂತುನ ಅಪ್ಪ ಅಮ್ಮ ಹಾಗೆಯೇ ಬೆಳೆದರು. ಆದರೆ ಮರ ಹತ್ತಿರವಿರಲಿಲ್ಲ ಯಾರ ಕಣ್ಣ ಬೆದರಿಕೆಯಲ್ಲಿ ಬೆಳೆಯಬೇಕು?

ಹೀಗೇ ತಂದೆ-ತಾಯಿ ಯೋಚಿಸತೊಡಗಿದರು. ಶುಂರೀಕೊಂಬಿನ ಶಾಮಣ್ಣಯ್ಯ, ಚುಟಿಗೆ ನಶ್ಯದ ಚನ್ನಪ್ಪಯ್ಯ, ಮೊಂಡಕೋಲು ಮಾಧೂ

ರಾಯ, ಇವರೆಲ್ಲ ಇಸ್ಕೂಲೇನೋ ಇಟ್ಟಿದ್ದರು, ಆದರೆ ಅವೆಲ್ಲ ಬಹು ದೂರ, ಬಲುದೂರ ಅವರೆಲ್ಲ ಸರ್ವಸಿದ್ಧಿ ಲಿಂಗೇಶ್ವರನ ಪೂಜಾರಕರು. ಅಂಥವರಿಂದ ಕಲಿತು ಆ ದೇಶದವರೆಲ್ಲ ಬುದ್ಧಿವಂತರಾಗಿದ್ದರೆಂದೇ ಹೇಳಬಹುದಾಗಿತ್ತು. ಆದರೆ ಚಿಂತಾಮಣಿ ಅಷ್ಟೊಂದು ದೂರ ಅಂಥವರ ಬಳಿಗೆ ಹೋಗುವಂತೆಯೇ ಇರಲಿಲ್ಲ

ಹೀಗೆ ಇರುವಾಗ, ಅಲ್ಲಿಗೆ ಬಂತು ಒಂದು ಮುದುಕಿ. ಬಂದೇ ಬಂದದ್ದು—'ಇದೇನೇ ಚಿಂತೂ ಅಮ್ಮ! ನಿನ್ನ ಕುರುದೇನ, ಅದೇನು, ದಾಂಡಿಗನ್ನ ಮಾಡುತೀಯ ಹೇಗೆ! ನಮ್ಮ ಮನೆಗೆ ಕಳಿಸು. ಒಂದಿಷ್ಟು ಮಗ್ಗಿ, ಬಾಯಿಪಾಠ ಹೇಳಿಕೊಟ್ಟು, ಮೀನು, ಮಿಗ ಹಿಡಿಯೋದೆಲ್ಲ ಕಲಿಸಿ ಕೊಟ್ಟೇನು, ಪಾಪ ' ಹೀಗೆಂದಳು.

ಮುದುಕಿ ಅಂದರೆ ಮುದುಕಿಯಲ್ಲ ಅದು—ಮಾಟ ಮದ್ದು ಮಾಡುವ ಮುದುಕಿ ಊರಲ್ಲಿ ಎಲ್ಲ ನಡುಗುತಾರೆ, ಆಕೆಯ ನೆರಳು ಕಂಡರೆ, ಹೀಗಿರುವಾಗ, ಚಿಂತೂ ಅಮ್ಮ ಏನು ಮಾಡತಾಳೆ ಪಾಪ,—'ಆಗಲಿ ಕಣ್ರೆ! ಅವರೂ ಬರಲಿ! ಏನಾದರೂ ತರಲಿ ಒಂದಿಷ್ಟು!' ಎನ್ನುವದರೊಳಗೆ; ಮಾಟದ ಮುದುಕಿ ಹೀಗೆಂದಿತು— 'ಒಂದಿಷ್ಟು ಏನಮ್ಮ ಒಂದಿಷ್ಟು-ಹಾಗೇನೂ ಬೇಡ ನೋಡು! ನಾನೆಲ್ಲ ಹಾಗೇನೇ ಕಲಿಸಿಕೊಟ್ಟು ಮನೆಗೆ ಕರೆದು ತಂದು ಬಿಟ್ಟು ಹೋದೇನಂತೆ. ಕಳಿಸಿಬಿಡು, ಪಾಪ, ಮಗು ವ್ಯರ್ಥ ಕಾಲಕಳೆಯುತ್ತಾ ಇದೆ.'

'ಬರುತೀಯ ಚಿಂತಣ್ಣ' ನನಗೆಲ್ಲ ಒರುತ್ತೆ. ಒಬ್ಬಳೇ ಇದ್ದು ಇದ್ದೂ ಎಲ್ಲ ಕಲಿತಿದ್ದೇನೆ. ಮೀನು ಹಿಡಿಯುವುದು, ಹಕ್ಕಿಗೆ ಬಲೆ ಬಿಸುವುದು, ಮೊಲ ಹಿಡಿಯುವುದು, ಮನೆಕೆಲಸ ಮಾಡುವುದು, ಅಡುಗೆ ಮಾಡುವುದು, ಲೆಕ್ಕ ಮಾಡುವುದು, ಮತ್ತು ಲೆಕ್ಕ ಇಡುವುದು. ಆಮೇಲೆ..'ಎನ್ನುತ್ತ ಬೆಟ್ಟು ಮಡಿಚುವ ಸಮಯದಲ್ಲಿ ಚಿಂತಾಮಣಿ—'ಮಂತ್ರ ಹಾಕುವುದು..' ಎನ್ನುವುದರಲ್ಲಿದ್ದ. ಅಷ್ಟರೊಳಗೆ ಚಿಂತೂ ಅಮ್ಮ 'ಬೇಡಪ್ಪ! ಮಂತ್ರ, ಮಾಟ, ಬೇಡ.' ಎಂದು ಬಾಯಿ ಹಾಕಿದಳು. ಆಗ ಮುದುಕಿ 'ಅದೇನೂ ಬೇಡಪ್ಪ ಈಗ ಇಷ್ಟು ಸಾಕು. ದೊಡ್ಡವನಾದಗ್ಗೆ ಅದೆಲ್ಲ.' ಎಂದು ಸಮಾಧಾನ ಮಾಡಿದಳು.

ಏನು ಮಾಡಿಯಾಳು ಚಿಂತೂ ಅಮ್ಮ. ಬೇಡಾಂದರೆ ನಷ್ಟ, ಬೇಕೂಂದರೆ ಕಷ್ಟ, ಸುಮ್ಮನಿದ್ದರೆ ಅನಿಷ್ಟ ಅಂತು ಇಂತು ಅಪ್ಪ ಅಮ್ಮ ಮನಸ್ಸು ಕಲ್ಲುಮಾಡಿ ಕಳಿಸಿಬಿಟ್ಟರು ಚಿಂತಾಮಣಿಯನ್ನ.

ಊರ ಹೊರಗೆ ಮಾಟದ ಮುಕ್ಕಿಯ ಮನೆ. ಸ್ವಲ್ಪ ಗೋಡೆ ಬಿದ್ದಿದೆ ಇಲ್ಲಿ. ಅಲ್ಲಿ ಕಿಟಕಿ ಈಚಿಗೆ ಬಂದಿದೆ ಬಾಗಿಲು ಒಳಗೆ ವಾಲಿದೆ ಅಡುಗೆಯ ಮನೆಯಲ್ಲಿ ಹುಲ್ಲು ಹುಟ್ಟಿದೆ. ಎಲ್ಲೆಲ್ಲೂ ಜೇಡನ ಪರೆ ಕಟ್ಟಿದೆ. ಗೋಡೆಯ ಮೇಲೆ ಒಂದು ಹಲ್ಲಿ. ಆ ದೊಡ್ಡ ಹಲ್ಲಿ ಸತ್ತಿದೆ. ಅದಕ್ಕೆ ಪೊಳೆ ಹೊಡೆದಿದೆ. ಅದರ ಈ ಕಡೆ ಒಂದು ಕರೀಬೆಕ್ಕಿನ ತಲೆ, ಮತ್ತೆ ಈ ಕಡೆ ಒಂದು ಗೂಬೇ ತಲೆ—ಸಾಕೋ ಇನ್ನೂ ಬೇಕೋ ? ಆದರೆ ಇದೊಂದು ಹೇಳಲೇಬೇಕು ಮೀಯಾಂವ್ ಮೀಯಾಂವ್ ಎನ್ನುವ ಮಾಳಬೆಕ್ಕೊಂದು—ಇನ್ನೂ ಎಲ್ಲೆಲ್ಲೋ ಏನೇನೋ ಇದ್ದವು—ಆದರೆ ಅವಕ್ಕ ಮಂತ್ರ ಹಾಕಿ ತಡೆಗಟ್ಟಿದೆ. ಆದ್ದರಿಂದ ಬಾಧೆ ಇಲ್ಲ ಬಿಡು.

ಇತ್ತಲಾಗಿ ಚಿಂತಾಮಣಿಗೆ ಏನಾಯಿತು ನೋಡೋಣ.

ಹುಡುಗ ಚಿಂತಾಮಣಿ ಬಂದ. ಮುದುಕಿಯ ಮನೆಯಲ್ಲಿ ಎಲ್ಲ ಅನುಕೂಲಗಳೂ ಇದ್ದವು. ಮೊಸರು-ನಿಲುವು, ಬೆಣ್ಣೆ-ಡಬ್ಬಿ, ತುಪ್ಪದ ಕಂಚು, ಸಕ್ಕರೆ-ಶೀಶೆ, ಬೆಲ್ಲದ ಗುಡಾಣ, ಹಿಟ್ಟಿನ ಮುಡಿಕೆ, ರೊಟ್ಟೀ ಬುಟ್ಟೀ, ಕೋಡುಬಳೆಸರ—ಇವೆಲ್ಲ ಇದ್ದವು. ಆದರೆ ಅವಕ್ಕೆಲ್ಲ ಆಶೆಪಡುವ ಹಾಗಿರಲಿಲ್ಲ. ಅವೆಲ್ಲ ನೋಡುವುದಕ್ಕೆ ಮಾತ್ರ. ಮುಟ್ಟಲಿಕ್ಕಿಲ್ಲ, ತಿನ್ನಲಿಕ್ಕಲ್ಲ.

ಮಂಚ, ಕುರ್ಚಿ, ಬೆಂಚು, ಮಣೆ, ಎಲ್ಲ ಸರಿ—ಆದರೆ ಅವೆಲ್ಲ ತಾವು ತಾವಾಗಿಯೇ ಮುಡಿಚಿ ಬಿಚ್ಚಿ ಸರಿದಾಡುತ್ತಿದ್ದವು. ರುಮಾಲು, ಅಂಗಿ, ಲಂಗ ಶೀರೆ, ಟೋಪಿ, ಕುಪ್ಪಸ, ಶರಾಯಿ, ಪಂಚೆ, ಕಾಚ, ಕಶೆ, ಕಾಲುಚೀಲ ಇವೆಲ್ಲ ಇದ್ದವು, ಆದರೆ ಯಾರವೋ ಯಾರು ಬಲ್ಲರು ?

—ಚಿಂತಾಮಣಿಗೆ ಇವಲ್ಲ ಹೇಳಬೇಡ, ಇನ್ನೂ ಹಸುಳೆ, ಹದರಿಕೂಂಡಾನು. ಇಲ್ಲ ಬಿಟ್ಟು ನೋಡೋಣ ಏನು ಮಾಡುತ್ತಾನೆಂದು—

ಮನೆ ಹಾಗೆ ಇತ್ತಲ್ಲ—ಇನ್ನು ಮುದುಕಿ ಹೇಗೆ, ಹೇಳಲೋ—ಕೇಳು !

ಕೆಲಸ ಬೇಕಾದರೆ ಮಾಡುತ್ತೆ. ಬೇಡವೋ, ದಿನ ರಾತ್ರಿ ಹಾಗೇ

ಕೂತುಬಿಡುತ್ತೆ. ಈ ಘಳಿಗೆ ಜಾಣೆ, ಇನ್ನೊಂದು ಘಳಿಗೆ ರಾಕ್ಷಸಿ. ಮುದುಕಿ ಬೇಕು, ಆದರೆ ಆಕೆಯ ಸಿಟ್ಟು ಬೇಡ. ಮನೆ ಬೇಕೆಂದರೆ ಆದರ ಮಾಟ ಮಂತ್ರ ಬೇಡ—ಇಂಥಾ ಮನೆಯಲ್ಲಿ ನೀನೇ ಇದ್ದಿದ್ದರೆ? ಹೆದರಿಕೆಯಾಗು ತ್ತಿತ್ತೆ? ಹೋಗಲಿ ಬಿಡು. ಚಿಂತಾಮಣಿ ಏನು ಮಾಡುತ್ತಾನೆ ನೋಡೋ ಣವೇ?

—'ಬಾಪ್ಪ! ಬಾ ಮಗು! ಬಾ ಚಿಂತು! ಚಿಂತುಮಣಿ! ಕೂತುಗೋ ಮೊದಲು, ಆಮೇಲೆ ಕೆಲಸ.' ಎಂದಿತು ಮುದುಕಿ. ಹುಡುಗ ಹೆದರುತ್ತ ಹೆದರುತ್ತ ಮೂಲೆಯಲ್ಲಿ ಕುಳಿತ ಆದರೆ ಮುದುಕಿ ಹತ್ತಿರ ಕರೆದು, ತಲೆ ನೇವರಿಸಿ ಮಾತಾಡಿದಳು. ತಿಂಡಿ ಕೊಟ್ಟಳು. ಊಟ ಹಾಕಿದಳು. ಅಂತು ಇಂತು ಎಲ್ಲಿಗೆ ಬಂತೆಂದರೆ, ಈ ಚಿಂತಾಮಣಿ ಮುದುಕಿಯ ಮನೆಯನ್ನ ಬಿಡ ದಷ್ಟು! ಮುದುಕಿಯ ಹೆದರಿಕೆ ಹೋಗುವಷ್ಟು!

ಹೀಗೇ ಕಾಲ ಕಳೆಯಿತು.

ಒಂದು ದಿನ ಮುದುಕಿಗೆ ಸಿಟ್ಟುಬಂದಿತ್ತು. ಅಸಾಧ್ಯ ಕೋಪ, ಉರಿ ಉರಿ ಉಗ್ರ. ಆಗ ಮುದುಕಿ—ಚಿಂತಾಮಣೀ—ಎಂದು ಅರಚಿದಳು. ಮನೆಯೆಲ್ಲ ನಡುಗಿತು. ನಡುಗುತ್ತ ಚಿಂತಾಮಣಿ ಬಂದನು. 'ಹೋಗು ನಡಿ, ನಡೀ! ಇನ್ನೂ ಇಲ್ಲೇ ಇದ್ದೀಯಾ?' ಎಂದು ಕಿರುಚಿದಳು. ಆ ಮಾಟದ ಮುಕ್ಕಿ.

ಚಿಂತಾಮಣಿ:– ಎಲ್ಲಿಗೆ ಹೋಗಲಿ ಅಜ್ಜೀ!

ಮುದುಕಿ:– ಹಸಿವೂ ಹಸಿವು! ಬೇಗ ಹೋಗಿ ಒಂದು ಮೀನನ್ನಾ ದರೂ ಹಿಡಿದುಕೊಂಡು ಬಾ.

ಚಿಂತಾಮಣಿ:– ಹೇಗೆ? ಎಲ್ಲಿ?

ಮುದುಕಿ:– ತಗೋ ಆ ಗಾಳ! ಆ ಕೋಲು, ಆ ದಾರ. ನಡೀ ಹೊರಡೂ.

ಚಿಂತಾಮಣಿಯು ಬೆಕ್ಕಿನ ಬಾಯಿಂದ ದಾರದ ಉಂಡೆ ಕಿತ್ತುಕೊಂಡು ಹೊರಟುಬಿಟ್ಟ. ಅಲ್ಲಿ ಹೋಗಿ, ಗಾಳಕ್ಕೆ ರೊಟ್ಟಿ ಚುಚ್ಚಿ, ದಾರ ಎಸೆದು, ಕುಳಿತನು ಆಗ ಒಂದು ಮೀನು—ಬಣ್ಣಬಣ್ಣದ್ದು— ಬಂಗಾರದ ರೆಕ್ಕೆಯುದು ಸಿಕ್ಕಿಬಿಟ್ಟಿತು. ಅದನ್ನು ತಂದು ಮುದುಕಿಯ ಕೈಗೆ ಕೊಟ್ಟನು. ಮುದು

ಕಿಯೂ ಅದನ್ನು ಮತ್ತೆ ಅವನ ಕೈಲಿಟ್ಟು, ತಪ್ಪಲೆಯ ನೀರಿನಲ್ಲಿ ಮುಳುಗಿಸಿ ಬೇಯಿಸಿ, ತೆಗೆದುಕೊಂಡುಬಾರೆಂದಳು.

ಚಿಂತಾಮಣಿ ಆ ಮೀನನ್ನು ನೀರಲ್ಲಿ ಹಾಕಿದನು. ತಪ್ಪಲೆಗೆ ಬಿಸಿ ಮುಟ್ಟಿತು. ಆಗ ಮೀನು ಹಾಡಲಾರಂಭಿಸಿತು. ದೂರದಲ್ಲೇನೋ ಮರಳುವ ಶಬ್ದ. ಅದೇ ಕ್ರಮೇಣ ಬಿರುಗಾಳಿಯ ಶಬ್ದ—ಕಡೆಗೆ ಹಾಡು ಹೇಳುವಂತಿತ್ತು—ಬೇಡಿಕೊಳ್ಳುವಂತಿತ್ತು.

ಚಿಂತು ಆಲೈಸಿದ—

ಕೆಟ್ಟೆ ಕೆಟ್ಟೆ ಕೆಟ್ಟೇ
ಪುಟ್ಟ ಚಿಂತು ಕೇಳೋ
ಸುಟ್ಟು ಸುಡುತಿದೆಯೋ
ಕೆಟ್ಟಕುದಿ ಬಿಸಿಯೋ !

‘ನಾನೇನ ಮಾಡಲಿ ಅದಕ್ಕೆ—ಬೇಯಲಿ ಮೀನು—ಎಂತ ಮುದುಕಿ ಕಟ್ಟಪ್ಪಣೆ ಮಾಡಿದಾಳಲ್ಲ’—ಎಂದು ಕುಳಿತ. ಮತ್ತೆ ಅದೇ, ಮತ್ತೆ ಅದೇ. ಆದರೆ ಈ ಬಾರಿ ಸ್ವಲ್ಪ ಕರುಣ ಒಂತು. ಕಾರಣ ಇದು—

ಕೆಟ್ಟೆ ತಮ್ಮ ಕೆಟ್ಟೇ
ಪುಟ್ಟ ತಮ್ಮ ಕೇಳೋ
ಕೆಟ್ಟ ಕುದಿ ಬಿಸಿಯೋ
ಸುಟ್ಟು ಸುಡುತಿದೆಯೋ!

ಇಷ್ಟೇ ಅಲ್ಲ. ಇನ್ನೂ ಇತ್ತು ಆ ಹಾಡು—

ಬಿಡಿಸೆಲೊ ನನ್ನ
ಕೊಡುವೆನು ಹೊನ್ನ
ಬೀಗದ ಕೈಯ್ಯ
ಬಾ ದಮ್ಮಯ್ಯ!

ಈ ಸಾರಿ ಚಿಂತಾಮಣಿಗೆ ಮುದುಕಿಯ ಮೇಲೆ ಸಿಟ್ಟು, ಮೀನಿನ ಮೇಲೆ ಪ್ರೀತಿ ಸಹಾ ಬಂದಿತು—ಆಗ ಏನು ಮಾಡಿದ......

ತಪ್ಪಲೆಯನ್ನು ಉರುಡಿಸಿಬಿಟ್ಟ. ಟನ್ ಟನ್ ಟನ್ ಠಣಣಣಣ ಎಂದು ಶಬ್ದವಾಯಿತು. ಜರ್ರೋ ಎಂದು ಬಿಸಿನೀರು ಹರಿದುಹೋಯಿತು.

ಮೀಸು ತೇಲಿಹೋಯಿತು. ಅಲ್ಲೀ ಕಾಲು ಬುಡದಲ್ಲಿ ಬಂಗಾರದ್ದು ಬೀಗದ ಕೈ ಬಿದ್ದಿತ್ತು. ಅದನ್ನು ಸರಕ್ಕನೆ ಜೇಬಿನೊಳಗಿಟ್ಟನು. ಅಷ್ಟು ವೇಳೆಗೆ ಮಾಟದ ಮುಕ್ಕಿ ಕೈಬೀಸಿ ಕಾಲುಹಾರಿಸಿ ಬಂದುಬಿಟ್ಟಳು. ಆದರೆ ಅಲ್ಲೀ ನಿತ್ತು? ಕಣ್ಣಿಗೆ ಕೈಕೊಟ್ಟು ಅಳುತ್ತಿದ್ದಂಥಾ ಚಿಂತು. 'ಉರುಟಿ ಹೋಯಿತಾ, ಬಿಡು. ಏನೂ ಹೋಯಿತೇನು? ಹೋಗಲಿಬಿಡು ಇನ್ನು ಮೇಲೆ ಹುಷಾರಾಗಿರು' —ಹೀಗೆಂದು ಬೆನ್ನು ತಟ್ಟಿ ಹೊರಟುಹೋದಳು. ಈ ಬಾರಿ ಚಿಂತಾಮಣಿ ಗೆದ್ದುಕೊಂಡೇಬಿಟ್ಟನು.

ಇನ್ನೊಂದು ದಿನ ಮಾಟದ ಮುಕ್ಕಿಗೆ ರೇಗಿತ್ತು. ದಿನವೇನೋ ಚೆನ್ನಾಗಿತ್ತು. ಬಿಸಿಲು ಹಬ್ಬಿತ್ತು, ಬಂಗಾರವಾಗಿ. ಹೂವೆಲ್ಲ ಅರಳಿದ್ದವು, ಅಲಂಕಾರವಾಗಿ ಗಾಳಿ ತಣ್ಣಗೆ ಬೀಸುತ್ತಿತ್ತು, ಸಡಗರವಾಗಿ. ಆದರೆ ಮೂಳಬೆಕ್ಕು ರೇಗಿತ್ತು, ಮಾಟದ ಮುದುಕಿ ಮುನಿದಿತ್ತು

'ಹಸಿವೆ, ಹಸಿವೆ, ಹಸಿವೆ! ಹಾಸಿವೆ! ಹಸೀವೆ! ಹಸಿವೇ' ಅಂತ ಹೊರಳಾಡುತ್ತ ಇದ್ದಳು ಮುದುಕಿ,

'ಮೀಯಾಂವ್! ಮಿಯಾಂವ್! ಮಿಯಾಂವೂ! ಮೀಯಾಂವೂ! ಮೀಯಾಂವೂ ಊ ಊ,' ಎಂತ ಕಾಳಬೆಕ್ಕು ಅರಚುತ್ತ ಇತ್ತು.

ಚಿಂತು ಎದ್ದವನೆ ಮೊಕ ತೊಳೆದು, ಹಳ್ಳದಲ್ಲಿ ಜಳಕಮಾಡಿ, ಅರಳೀ ಮರವನ್ನು ಬಲಗೊಂಡು ಸೂರ್ಯನಿಗೆ ಕೈಮುಗಿದು ಬಂದನು. ಹೊಸಿಲು ದಾಟಿದ ಒಳಗ ಬಂದ, ನಡುಮನೆಯಲ್ಲಿ ನಿಂತುಕೊಂಡನು. ಆ ವಿಪರೀತ ವೆಲ್ಲ ನೋಡಿ, ಆ ಮುದುಕಿಗೆ ಹೀಗೆಂದನು-'ಅಜ್ಜಿ! ಏನಾದರೂ ಬೇಯಿಸ ಲೇನು, ಕುದಿಸಲೇನು, ಕರಿಯಲೇನು, ಹುರಿಯಲೇನು? ಏನು ಬೇಕಜ್ಜೀ?'

ಚಿಂತಣ್ಣನ ಮಾತು ಕೇಳಿ-'ಬಂದೆಯಾ! ಈಗಲೀಗ ಕೇಳಿತೇಪ್ಪ ನನ್ನ ಕೂಗು ಆ ಬಿಲ್ಲು ತಗೋ, ಆ ಬಾಣ ತಗೊ, ಕೂಗುತಾ ಇದೆಯಲ್ಲ ಆ ಹಕ್ಕಿ ಅದನ್ನ ಹಿಡಿದು, ಕೊಂದು, ತಾರೈಯ್ಯ, ಚಿಂತುಮಣಿ,' ಎಂದು ಹೇಳಿದಾಗ, ಚಿಂತಾಮಣಿ ಹೇಳಿದನು, 'ಅಯ್ಯೋ ಮುಕ್ಕವ್ವಾ! ಬಾಣ ದಲ್ಲಿ ಹೊಡೆದೆನೆಂದರೆ ಸಾಯುತ್ತೆ ಅದು. ಮತ್ತೆಲ್ಲಿ ಕೂಗುತ್ತೆ?' ಅದಕ್ಕೆ ಮುದುಕಿಯು ಬೆದರಿಕೆಯಾಗುವ ಹಾಗೆ ನಕ್ಕು 'ಹಾ! ಹೌದು, ಕಂಡೆಯಾ! ಈ ಮಂತ್ರದ ಪಂಜರ ತಗೊ. ದೂರದಲ್ಲಿ ಕೋತಿಮರದ ಬುಡದಲ್ಲಿಡು.

ಹಕ್ಕಿ ಬಂದರೆ ಅದೇ ಅದಾಗಿ ಪಂಜರ ಬಾಗಿಲು ತೆರೆಯುತ್ತೆ, ಹಕ್ಕಿ ಒಳಗೆ ಹೋಗುತ್ತ್ತ. ಆಗ ಬಾಗಿಲು ಸರಕ್ಕನೆ ಮುಚ್ಚುತ್ತೆ ಆಗ ನೀನೇನು ಮಾಡು ತ್ತೀಯ ? '

ಚಿಂತು:- ಭರಭರನೆ, ತಂದುಕೊಡುತ್ತೇನೆ.

ಮುದುಕಿ:- ಹಾಗಿರಬೇಕು ಚಿಂತಾಮಣೀ.

ಮಾಟದ ಮುದುಕಿ ಹೇಳಿದಂತೆಯೇ ಎಲ್ಲ ಸಾಗಿತು ಹಕ್ಕಿ ಸಹ ಮನೆಗೆ ಬಂತು, ಮುದುಕಿ ಅದನ್ನ ಕಂಡವಳೇ ಹಿಡಿದು ಮಳಮಳ ಮರಳುವ ಎಣ್ಣೆಯ ಬಾಂಡಲೆಯಲ್ಲಿ ಹಾಕಿಬಿಟ್ಟಳು

' ಚಿಂತಾಮಣಿ ! ಅದೋ ಆ ಹಕ್ಕಿಯನ್ನು ಹುರಿದು ತಟ್ಟೆಯಲ್ಲಿ ಇಟ್ಟು ಗೊಂಡು ಬಾ. ತುಟಿ ಪಿಟಕ್ಕೆನ್ನಬಾರದು. ಏಕೆ, ಏನು, ಎತ್ತ ಎಂದೇನಾ ದರೂ ಕೇಳೀಯೋ ಹೇಗೆ ? ' ಎಂದು ದೃಷ್ಟಿಸಿ ನೋಡಿದಳು ಮಾಟಗಾರ್ತಿ.

' ಇಲ್ಲ, ಏನೂ ಇಲ್ಲಜ್ಜಿ, ಹುರಿದೇ ತರುತ್ತೇನೆ, ಕರಿದೇ ತರುತ್ತೇನೆ. ನೀನು ನಡಿಯಜ್ಜಿ—' ಹೀಗಂದನು ಬಾಂಡಲೆಯ ಬಳಿಗೆ ಹೋಗಿ ನಿಂತನು.

ಕಟ್ಟಾಣಿ ಹಕ್ಕಿ, ಪುಟ್ಟಾಣಿ ಪುಟ್ಟಹಕ್ಕಿ, ಕೆಂಪು ಕಣ್ಣು, ನೀಲಿ ತಲೆ, ಹಳದಿ ಕೊಕ್ಕು, ಬಂಗಾರದ ಹೊಟ್ಟೆ, ನಿಂಬೆಹಣ್ಣಿನ ಬೆನ್ನು, ಬಣ್ಣಬಣ್ಣದ ರೆಕ್ಕೆಪುಕ್ಕ—ಇಂಥ ಹಕ್ಕಿ ಮುಳುಗುತ್ತ ಏಳುತ್ತ ಬಾಯಿಬಾಯಿ ಬಿಡುತ್ತಾ ಇತ್ತು ಚಿಂತಾಮಣಿ ಹಾಗೇ ಕುಳಿತುಬಿಟ್ಟ. ಮನಸ್ಸು ಮರುಗಿತು, ಹೃದಯ ಕೊರಗಿತು ಕಣ್ಣು ನೀರಾಡಿತು, ಮೈಯೆಲ್ಲ ನಡುಗಿತು. ಆಗ-ಲೀಗ ಒಂದು ದನಿ ಬಂತು ಆ ದನಿ ದೊಡ್ಡದಾಯಿತು, ಉದ್ದವಾಯಿತು, ಕಡೆಗೆ ಅದೊಂದು ಹಾಡೇ ಆಗಿಬಿಟ್ಟಿತು.

ಕಟ್ಟಿ ಕೆಟ್ಟಿ ಕೆಟ್ಟೀ
ಪುಟ್ಟ ಚಿಂತು ಕೇಳೋ
ಸುಟ್ಟು ಸಿಡಿಯುತಿದೆಯೋ
ಕೆಟ್ಟಕುದಿ ಬಿಸಿಯೋ !

ಸುಟ್ಟರೆ ಸುಡಲಿ. ನಾನೇನು ಮಾಡಲಿ. ಶಿಕ್ಷೆ ಆಯಿತು ಆಗಲಿ-ಏನು ಬಿಟ್ಟು. ಆದರೂ ಹಾಗೇ ಜೇಬು ಮುಟ್ಟಿ ನೋಡಿದ. ಅದರಲ್ಲಿ ತ್ತಲ್ಲ—ಆ ಬೀಗದಕೈ—ಅದನ್ನು ಹಾಗೇ ತೆಗೆದುನೋಡಿ ಅದಕ್ಕೊಂದು

ಮುತ್ತುಕೊಟ್ಟು, ಒಳಗಿಟ್ಟುಕೊಂಡನು. ಅದು ಯಾವ ಬೀಗದಕ್ಕೈ ಹೇಳು ?

ಆಗ ಮತ್ತೆ ದನಿ ಜೋರಾಯಿತು. ಬಾಂಡ್ಲೆಯಿಂದ ಕೇಳಿಬಂದಂಥ ಆ ಪದ್ಯ ಕೇಳಪ್ಪ—

ಚಿಂ ಚಿಂ ಚಿಂ ಚಿಂತುಮಣೀ
ಚಿಂ ಚಿಂ ಚಿಂ ಚಿಂತುಮಣೀ
ಚಿಂತೆಯೇಕೊ
ಮುದ್ದುಗಿಣೀ
ಬೆಳ್ಳಿತಾರೆ
ಹಿಡೀ ಬಾ, ಹಿಡೀ ಬಾ !
ನಿನಗೆ ಕೊಡುವೆ
ತಗೋ ಬಾ, ತಗೋ ಬಾ !
ಬಿಡಿಸು ಮರೀ
ಉರೀ ಉರೀ
ಅರೇ ಅರೇ
ಉರೀ ಉರೀ
ಉರೀ ಉರೀ
ಉರೀ ಉರೀ
ಉರೀ ಉರೀ

ಹೀಗೆಂದು ದನಿ ಕುಗ್ಗುತ್ತ ಬಂದಿತು. ತಡಿಯಲಾರದೆ ಹೋದ ಚಿಂತಾಮಣಿ. ಹಲ್ಲುಮುಡಿಕಚ್ಚಿದ. ಮಾಟದ ಮುಕ್ಕಿಯ ಕಡೆಗೆ ಬೆಂಳೆಲ್ಲ ಒತ್ತಿ ಚಟಚಟನೆ ಮುರಿದ. ಎದ್ದುಹೋದ. ಮೂಲೆಯಲ್ಲಿದ್ದ ಕೋಲು ಹಾಕಿ ಬಾಂಡ್ಲೆ ಉರುಡಿಸಿಬಿಟ್ಟ—ಫಸ್ಸೆಂತು, ಧಗ್ಗೆಂತು, ಪಟಪಟ ಎಂತು ! ಹಕ್ಕಿ ಹಾರಿಹೋಯಿತು. ಆದರೆ ಕೋಲು ತುದಿಯಲ್ಲಿ ಮಿಣಮಿಣ ಮಿನುಗುವ ತಾರಕ್ಕೆಯೊಂದಿತ್ತು.

ಆ ತಾರೆಯೇ ಬೆಳ್ಳಿಯ ತಾರೆ. ಅದು ಸರಕ್ಕೆಂದು ಅವನ ಜೇಬಿಗೆ ಹಾರಿಹೋಯಿತು. ಅಷ್ಟರಲ್ಲಿಯೇ ಮುದುಕಿ ಓಡಿಬಂದಳು.

ಆದರೆ ಅಲ್ಲಿ ಯಾರಿದ್ದರು ? ಯಾರೂ ಇಲ್ಲ.

ಚಿಂತಾಮಣಿ ಓಡಿಯೋ ಓಡಿದ. ತನ್ನ ತಾಯಿಯ ಸೆರಗಿನ ಒಳಗೆ ಅವಿತುಕೊಂಡುಬಿಟ್ಟ. ಮಾಟದ ಮುಕ್ಕಿ ಬಂದೇಬಂದು ಚಿಂತುವನ್ನು ಆಗಿದೇಹಾಕಿಬಿಡುತ್ತಿದ್ದಳು. ಆದರೆ ಏನೇನಿತ್ತಲ್ಲ ಏನೇನು !......

ಆ ಏನೇನು ಆ ಜಿಸಿನೀರೆಲ್ಲ ಸೇರಿಸಿಕೊಂಡು ಕಾದಿತ್ತು, ಒಂದು ಹಳ್ಳ ಮಾಡಿಕೊಂಡು ! ಅಲ್ಲಿಗೆ ಬಂದಳೋ ಇಲ್ಲವೋ ಮುದುಕಿ, ಆಗ ಆಕೆಯ ಕಾಲೆಲ್ಲ ಸುಡು ಸುಡು ಆಯಿತು—

ಆ ಹಕ್ಕಿ ಇತ್ತಲ್ಲ ಅದು, ತನ್ನ ರೆಕ್ಕೆಯನ್ನೆಲ್ಲ ಕೊಡವಿಬಿಟ್ಟಿತು. ಕಾದೆಣ್ಣೆಯೆಲ್ಲ ತಲೆಯಮೇಲೆ ಬಿದ್ದು, ಮುದುಕಿ ಸತ್ತೇಹೋಯಿತು........ ಹೋಗಲಿಬಿಡು

ಚಿಂತಾಮಣಿಯ ಹತ್ತಿರ ಬೀಗದಕೈ ಇತ್ತಲ್ಲವೆ? ಅದು ಯಾವ ಬೀರು ಯಾವ ಪೆಟ್ಟಿಗೆ ಕಂಡದ್ದು ಕಾಣದ್ದೆಲ್ಲ ಬಾಗಿಲು ತೆಗೆಯಿಸಿಬಿಡುತ್ತಿತ್ತು. ಎಲ್ಲೆಲ್ಲಿ ನೋಡಿದರೂ ವಜ್ರ, ವೈಡೂರ್ಯ ಬಂಗಾರ ಬೆಳ್ಳಿ—

ಇಷ್ಟೇ ಏನು ! ಅಲ್ಲ ಅಲ್ಲ—ಆ ನಕ್ಷತ್ರ ಇತ್ತಲ್ಲ—ತಾರಕ್ಕಿ ಬೆಳ್ಳಿಯ ತಾರೆ ! ಅದು ರಾತ್ರಿಯೆಲ್ಲ ಬೆಳಕು ಕೊಡುತಾ ಇತ್ತು. ಹಗಲು ಹಸಿವಾದಾಗಲೆಲ್ಲ ಆ ಬೆಳ್ಳಿ ತಾರೆಯನ್ನು ಅವರಮ್ಮ ರಂಗೋಲಿ ಹಾಕಿದ ನೆಲದ ಮೇಲಿಟ್ಟು, 'ಚಿಟ್ಟಿಚಿಟ್ಟಿಂ' ಎಂದು ಮೂರು ಸಾರಿ ಹೇಳಿ, ಒಟ್ಟಿ ಮುಚ್ಚಿ ತೆಗೆದರೆ ಸಾಕು—ಘಮಘಮ ಘಮಾಂತ, ತಿಂಡಿ-ತೀರ್ಥ, ಪಾಯಸ-ಪಳದ್ಯ, ತುಂಬಿತುಂಬಿ, ಸುಮ್ಮ ಸುಮ್ಮನೇ ತುಳುಕಿ ಹೋಗುತ್ತಿದ್ದವು—ಆಗ ಎಲ್ಲರಿಗೂ ಆನಂದ. ಎಲ್ಲರಿಗೂ ಊಟ

ಚಿಂತು ಅಪ್ಪ—' ಇವನು ಹೀಗಾಗಿ ಬೆಳೀತಾನೆಂತ ನಾ ಕಂಡಿರಲಿಲ್ಲ ಕಣೇ ! '—ಎನ್ನುವರು.

ಚಿಂತು ಅಮ್ಮ—' ನಮ್ಮ ಚಿಂತಾಮಣಿ ! ಭಾಗ್ಯದ ಕಣಿ ! ಬಾಪ್ಪ ಒಂದೇ ಒಂದು ಮುತ್ತು ಕೊಡುತ್ತೇನೆ ' ಎನ್ನುವರು.

ಆದರೆ ಚಿಂತಾಮಣಿಗೆ ನಾಚಿಕೆ. ಮುತ್ತುಗಿತ್ತು ಅವನಿಗೆ ಸೇರದು. ಇಂಥಾ ರತ್ನದಂಥಾ ಹುಡುಗ ಇನ್ನೊಬ್ಬನು ಯಾವನಾದರೂ ಇದ್ದರೆ, ಅವನಿಗೂ ಸಹ ಚಿಂತಾಮಣಿ, ಚಿಂತಾಮಣಿ ಎಂದು ಹೆಸರಿಡೋಣ.

———

## ಪರಾಕ್ಷಿ

ಮನೆಬಿಟ್ಟು ಬೆಂಕಿಕಡ್ಡಿ ಹೊರಗೆ ಬಂದು ಹಜಾರದಲ್ಲಿ ತಲೆನೀಡಿತು; ' ಒಳಗೆ ಬಲು ಶೆಖೆ ' ಎಂದಿತು. ಆಕ್ಷಣ ಬಂದಿತು ಅಸಾಧ್ಯ ತಲೆನೋವು. ಸುಗ್ಗೀಕಾಲದ ಚಂದ್ರನು ನಗುತಲಿದ್ದನು ನಕ್ಷತ್ರಗಳೆಲ್ಲ ಮೋಡಗಳನ್ನು ತೊಳೆದು ಬೆಳ್ಳಗೆ ಮಾಡಿ ರಾಶಿ ರಾಶಿ ಮಾಡುತಲಿದ್ದವು. ಮಂಜಿನ ಗಾಳಿ ಹೊರಗೆ ಬಂದವರನ್ನೆಲ್ಲ ಹಿಡಿಹಿಡಿದು ಮಾತನಾಡಿಸುತಲಿತ್ತು. ಅಂತು ಬೆಂಕಿ ಕಡ್ಡಿಗೆ ತಲೆ ಕಾದು ಕಾದು ಹತ್ತಿಕೊಂಡು ಉರಿಯಲಾರಂಭಿಸಿತು. ' ಉರೀ, ಉರೀ !! ಎಂತ ಕೂಗಿತು.—ಶಿವಮೊಗ್ಗೆ ಊರಲ್ಲಿ !

ಈ ಕೂಗು ಕೇಳಿ ಅದರ ದೊಡ್ಡಣ್ಣ ಊದುಗಡ್ಡಿ ತನ್ನ ಕೊಳವಿಮನೆ ಬಿಟ್ಟು ಮೈಸೂರಿಂದ ಬಂದ. ಕೇಳಿತು ಮೊರೆ. ' ಅಯ್ಯೋ! ಉರಿ! ಯಾರೂ ಇಲ್ಲವೆ ? ' ' ನಾನಿರುವೆನಲ್ಲ ' ಎಂದುಕೊಂಡು ಊದುಬತ್ತಿ ಬಾಗುತ, ಒಳ ಕುತ ಬಂತು; ' ಅಯ್ಯೋ ! ನನ್ನಪ್ಪಾ ! ' ಎಂದು ತಲೆಗೆ ಮುತ್ತಿಟ್ಟು ಬೆಂಕಿ ಆರಿಸಲು ಹೋಯಿತು. ಆದದ್ದೇನು ? ಏನು ಮಾಡಿದಹಾಗಾಯಿತು ? ಊದುಕಡ್ಡಿಯ ತಲೆಯೂ ಕೂಡ ಹತ್ತಿಕೊಂಡುಬಿಟ್ಟಿತು ಹೊಗೇ ಹೊಗೇ ಎಲ್ಲೆಲ್ಲೂ ಹೊಗೆ ಎಲ್ಲೆಲ್ಲೂ ವಾಸನೆ ಊದಣ್ಣನ ಕಂಪಿನ ಕರೆ ಕೇಳಿ ಗಾಳಿರಾಮ ಓಡಿಬಂದನು ನಿಂತು ನೋಡಿ, ಈ ಕಂಪಿನ ಸಮಾಚಾರ-ವನ್ನ ಪ್ರಪಂಚಕ್ಕೇ ಹರಡಿಬಿಟ್ಟನು.

ಈ ಹೊತ್ತಿಗೆ ಆಕಾಶವಿಮಾನದಲ್ಲಿ ಬಂದಿಳಿದನು—ಯಾರೂಂತ ? ಪರಾಕ್ಷಿ. ಅವನು ಬಂದದ್ದು ಚೀನಾದೇಶದಿಂದ ಮೊಟ್ಟಮೊದಲು ನಮ್ಮಲ್ಲೇ ಇದ್ದವನು ಬೌದ್ಧಮತವನ್ನು ಹರಡಲಿಕ್ಕ ಅಲ್ಲಿಗೆ ಹೋಗಿದ್ದು, ಈಗಲೀಗ, ಈ ಗದ್ದಲ ಕೇಳಿ ಬಂದನು ವಿಮಾನ ಇಳಿದು ನೋಡಿದರೆ ಈ ಅವಸ್ಥೆ. ಬೆಂಕಿಕಡ್ಡಿಯು ಇನ್ನೇನು ಉರಿದೇ ಹೋಗಿತ್ತು ಊದುಬತ್ತಿಯು ಒಳಗೇ ನೋವು ತಿನ್ನುತಲಿತ್ತು. ತಡಿಯಲಾರದೆ ಪರಾಕ್ಷಿಯು ಇಳಿದುಬಂದು, ಉದ್ದನೆ ನಾಲಿಗೆ ನೀಡಿ ಮಾತನಾಡಿಸಲು ಹೋದರೆ—ಏನಾಗಬೇಕು ! ಅದರ ನಾಲಿಗೆ ಸುರಸುರ ಹತ್ತಿಕೊಂಡೇಬಿಟ್ಟಿತು ಅಸಾಧ್ಯ ಉರಿಯು ಹೊಟ್ಟೆಯೊಳಕ್ಕೆ ನುಗ್ಗಿದ ತಕ್ಷಣವೇ ಪರಾಕ್ಷಿಯು ಹೊರಹೊರಳಿತು. ಊದಿನಕಡ್ಡಿಯು ಏನಾಯಿತು, ಏನಾಯಿತು ಎನ್ನುವಷ್ಟರಲ್ಲೇ ' ಡಸ್ ಡಬ್ ಪರಾರ್'' ಎಂತ ಆಕಾಶ ಒಡೆಯುವಷ್ಟು ಸದ್ದಾಯಿತು. ಪರಾಕ್ಷಿಯು ಹೊಟ್ಟೆಯೊಡೆದು, ಉರಿದು, ಶೀದುಹೋಯಿತು. ಆಗಲೋ ಪ್ರಪಂಚವೇ ನಡುಗಿತು. ಸಮುದ್ರವು ಅಲ್ಲೋಲಕಲ್ಲೋಲವಾಯಿತು ಮೇಲಿನಿಂದ ನಕ್ಷತ್ರಗಳೆಲ್ಲ ಇಳಿದುಬಂದವು. ಎಲ್ಲೆಲ್ಲೂ ಅಸಾಧ್ಯ ಬೆಳಕಾಯಿತು ಎಲ್ಲರಿಗೂ ಕಣ್ಣು ಕೊಕ್ಕರಿಸಿತು.

ಅತ್ತಲಾಗಿ, ಪಾತಾಳದಲ್ಲಿ ಗದ್ದಲಹತ್ತಿತು. ' ಇದೇನು ದೀಪಾವಳಿ ಬಂದೇಬಿಟ್ಟಿತೆ ಇಷ್ಟು ಬೇಗ ' ಎಂದು ಬಲೀಂದ್ರನು, ಹೊರಡಲು ಸಿದ್ಧನಾದನು. ಬಲಿಯು ಭೂಮಿಗೆ ಹೋಗುವನೆಂದು ಸುದ್ದಿ ಹಬ್ಬಿದಕೂಡಲೆ

ಕೇದಿಗೆ, ಪಾರಿಜಾತ ಮೊದಲಾದ ಹೂಗಳು ಮೊದಲೆದ್ದುಬಂದುವು. ಆ ರಾತ್ರಿಯಲ್ಲಿ ಆ ಬೆಳಕಿನ ಜತೆಗೆ ಈ ಹೂಗಳ ಪರಿಮಳ. ಬಲಿಯೂ ಎದ್ದು ಬಂದನು. ( ಮಾಲಿಂಗಿ ಮಡುವಿನಿಂದ ಎದ್ದನೆಂದು ಕೆಲವರು ಹೇಳಿದರು ) ಅಂತು ಆ ಗದ್ದಲದ ಜಾಗಕ್ಕೆ ಬಂದನು. ಆ ರಾತ್ರಿ ಈ ಭೂಮಿಗೆ ಎಷ್ಟೋ ಜನ ಹಿಂದಿನ ಹಿರಿಯರೂ ಸಹ ಬಂದರು. ಚುಕ್ಕಿಗಳ ಬೆಳಕು, ಕುಸುಮಗಳ ಕಂಪು, ಬರುವವರ ಹೆಜ್ಜೆಗಳ ಸದ್ದು........ಇದೆಲ್ಲಕ್ಕೂ ಕಾರಣ ಯಾರು ? ಪರಾಕ್ಷಿ ! ಪರಾಕ್ಷಿ !

ಬಲೀಂದ್ರನು ನಿಂತು ಎಲ್ಲವನ್ನೂ ನೋಡಿ ಹೀಗೆ ಹೇಳಿದನು.— 'ನಾನಿದ್ದಾಗ ಇದ್ದ ಸೌಭಾಗ್ಯ ಈಗ ಇಲ್ಲ! ಏನೋ ಭೂಮಿ ಎಂತ ಹೆಸರಿಗೆ ಇದೆ. ಶ್ರೀ ಮಹಾವಿಷ್ಣುವು ಬೇಡವೆಂದ ಮೇಲೆ, ನಾನು ಹೊರಟುಹೋದೆ. ಪಾತಾಳದಲ್ಲಿ ಇದ್ದರೂ ಕೂಡ, ಈ ಭೂಮಿಯ ವಾಂಛಲ್ಯ ಬಿಡಲಿಲ್ಲ. ವರ್ಷಕ್ಕೆ ಒಂದು ಬಾರಿ ಬರಲೇಬೇಕಾಗಿದೆ. ಓಹೋ ! ಇನ್ನೇನು ಹೊರ ಡಲೇಬೇಕು. ಉದ್ದಿನಕಾಳು ಉರುಡಿತು.' ಎಂದು ಬಲೀಂದ್ರನು ಹೊರಡು ವಷ್ಟರಲ್ಲಿ, ವಾಮನಾವತಾರಿ ಶ್ರೀಹರಿ ಬಂದೇಬಿಟ್ಟನು. ಗರುಡನ ಬೆನ್ನಿ ನಿಂದ ಇಳಿದನು. ಪರಾಕ್ಷಿಯನ್ನ ಕೈಹಿಡಿದೆತ್ತಿದನು. ನೆರೆದಿದ್ದವರಿಗೆ ಹೀಗೆ ಹೇಳಿದನು—' ಈತನೇ ನರಕಾಸುರನು. ನನ್ನಿಂದ ಮೊದಲೇ ಕೊಲ್ಲಲ್ಪಟ್ಟಿ ದ್ದರೂ ಕೂಡ ಬಲೀಂದ್ರ ಬಂದಾಗ್ಗೆ ತಾನೂ ಕೂಡ ಭೂಮಿಗೆ ಬರಬೇ ಕೆಂದು ವರ ಕೇಳಿಕೊಂಡನು. ಅವನ ಪ್ರಾರ್ಥನೆಯಂತೆ ಅವನನ್ನು ಇಲ್ಲಿಗೆ ವರುಷವರುಷವೂ ಕಳುಹಿಸಿಕೊಡುತ್ತಿದ್ದೇನೆ ಮತಾಪು, ಸುರಬತ್ತಿ, ಆಕಾಶ ಬಾಣ ಮೊದಲಾದವರು ಈತನ ಸೈನ್ಯದವರು. ಬಲಿಮಹಾರಾಯ ! ನೋಡಿ ದೆಯ, ನೀನಾಳುತಲಿದ್ದ ರಾಜ್ಯವನ್ನು. ಈ ನರಮಂಡಲದವರು ನಿನ್ನನ್ನು ಮರೆತಿಲ್ಲ. ಬಾ; ಪೂಜೆಪುರಸ್ಕಾರಗಳನ್ನು ಕೈಕೊಂಡು ಹೊರಡೋಣ' ಹೀಗೆಂದು ಹರಿಯು ಬಲಿಯೊಡನೆ ಧರೆಯನ್ನು ತಿರುಗಿ ಪಾತಾಳಕ್ಕೆ ಇಳಿ ದನು.

ಪಟಪರಾರ್ ಎಂತ ಶಬ್ದವಾಯಿತು. ಕಿವಿಯಲ್ಲಿ ಯಾರೋ ಬುರ್ರೋ ಎಂದಹಾಗಾಯಿತು. ಶಾಮಿ ದಿಗ್ಗನೆ ಎದ್ದನು. ಖದ್ದರ ಶಾಲನ್ನು ತೆಗೆದೆಸೆ

ದನು. ' ಯಾರೇ ಅದು ! ಶಾರಿಯೇನೆ ! ಅಬ್ಬಾ! ಎಂಥಾ ಕನಸು. ಪರಾಕ್ಷೀ ಕನಸು ' ಎಂದು ಶಾರದೆಯ ಕೈಹಿಡಿದು ಬಾಗಿಲಿಗೆ ಹೊರಟನು. ಹೊರಗಡೆ ಮಬ್ಬು ಮಬ್ಬು, ಇನ್ನೂ ಬೆಳಗೇ ಆಗಿಲ್ಲ. ಆಗಾಗಲೇ ಬಾಗಿಲು ಪಕ್ಕಗಳಲ್ಲಿ ಕೆರಕನನ್ನ ಇಟ್ಟಿದಾರೆ. ಬಾಗಿಲಲ್ಲಿ ತೋರಣ. ಶಾರದೆ ಎಂದಳು ' ಶ್ಯಾಮೀ ! ನೀನೆರಕೊಳ್ಳಲ್ಲವೇನೋ ! ನೋಡು ನನಗೆ ಎಷ್ಟೊಂದು ಮತಾಪು, ಪಟಾಕಿ, ಅಪ್ಪ ಕೊಟ್ಟಿದಾನೆ. ಇದೇ ನನ್ನ ಹೊಸ ಲಂಗ. ಹಳದೀ ಖದ್ದರಿಂದ್ರೂ, ಅದರಲ್ಲೆಲ್ಲ ಚುಕ್ಕಿ ಚುಕ್ಕೀ ' ಇಷ್ಟುಹೊತ್ತಿಗೇ ಗೌರಾ ಬಂದಳು. ' ಒನ್ನಿ ಒನ್ನೀ ಆಜ್ಜಿ ಕರೀತಾಳೆ ಎರಕೊಂಡೋರಿಗೇ

ಕೆರಕನ ಸೊಡಲು
ನರಕಸ ಪಿಂಡ
ನರಕನ ಪಿಂಡ—ನಿಂಗೇ

ಇಲ್ಲ. ನೀನ್ಯಾಕೆ ಏಳಲಿಲ್ಲ. ' ಶ್ಯಾಮಿ ಎಂದ ' ಊಟಕ್ಕೆ ಮುಂಚೆ....ಎರ ತಕ್ಕೆ ಹಿಂಚೆ. ಆದರೇನು ನನಗೊಂದು ಕನಸಾಯಿತು. ಅದರಲ್ಲಿ ಪರಾಕ್ಷಿ, ಬಲೀಂದ್ರು, ಅವತಾರ ಎಲ್ಲ ಇತ್ತು' ಗೌರಾ ಕರಗಿಹೋದಳು. ' ಹೇಳೋಽಽ ' ಎಂದು ಅಂಗಲಾಚಿ ಬೇಡಿಕೊಂಡಳು. ಶಾಮಿ ಕಣ್ಣು ಕೊಕ್ಕರಿಸಿ ' ಕೊಡೀ ಮತ್ತೆ ಪಟಾಕಿ, ಮತಾಪೂ,........ನಿಮಗೇನು ಹಚ್ಚೋಕೆ ಬರುತ್ತೆಯೇ.... ಆಹಾ ! ಎಂಥಾ ಕನಸು, ಪರಾಕ್ಷಿ ಕನಸು '

ಶ್ಯಾಮಿಯು ಆ ಕನಸನ್ನು, ಆ ದಿನ
ಕಂಡಕಂಡವರಿಗೆಲ್ಲ ಹೇಳಿದನು.
ಎಲ್ಲರಿಗೂ ಆಗುವುದೇನು ಬಲೀಂದ್ರನ
ಕನಸು ? ಪರಾಕ್ಷಿ ಕನಸು ?

———

# ವರಪ್ಪುಯರ

ಪುಟ್ಟಣ್ಣಾ! ಇದೊಂದು ಕಥೆ ಕನ್ನಡ ಭಾಷೆಗೆ ಪುಟ್ಟಕ್ಕ ಎನಿಸಿರುವ ಭಾಷೆಯೊಂದಿದೆ. ಅದು ಜೇನುತುಪ್ಪದ ಹಾಗೆ ರುಚಿಯಾಗಿದೆ. ಅದು—ತಮಿಳು ಭಾಷೆ. ಆದರಿಂದ ಒಂದು ಕಥೆಯನ್ನು ಆರಿಸಿದ್ದೇನೆ ತಮಿಳು ಯಾರಾದರೂ ಆಡುತ್ತಾ ಇದ್ದರೆ ಆಲೈಸಿ ಕೇಳಿ ನೋಡು ಅದರಲ್ಲಿ ಕನ್ನಡ ಮಾತು ಬಹಳ ಇರುವವೋ ಇಲ್ಲವೋ! ಇದ್ದರೆ ನಿನ್ನಲ್ಲಿರುವ ಪುಟ್ಟ ಪುಸ್ತಕದಲ್ಲಿ ಬರೆದಿಟ್ಟುಕೊ

ವರಪ್ಪುಯರ—ಬದುವೇರಲಿ—ಎಂಬುದೇ ಈ ಕಥೆಯ ಹೆಸರು.

ಅವ್ವೆಯಾರು ಎಂಬುವರು ಹಾಡು ಬರೆವುದರಲ್ಲಿ ಬಹಳ ಹೆಸರುವಾಸಿ. ಅವ್ವೆಯಾರು ಹೆಂಗಸರು. ಗಂಡಸಿಗೆ ಕವಿ ಎಂದು ಹೆಸರಾದರೆ, ಹೆಂಗಸರಿಗೆ ಏನೆನ್ನುವರು?—ಯಾರನ್ನಾದರೂ ಕೇಳಿ ತಿಳಿದುಕೊ ಅವ್ವೆಯಾರ ಹೆಸರು ಎಲ್ಲೆಲ್ಲಿಯೂ ಹರಡಿತು. ಒಂದು ದಿನ ಆ ಊರಿನ ರಾಜನು ಅವ್ವೆಯಾರನ್ನು ಅರಮನೆಗೆ ಕರೆಯಕಳಿಸಿದನು ಮೇನದ ಒಳಗೆ ಕುಳಿತುಕೊಂಡು ಅವ್ವೆಯಾರು ಅರಮನೆಗೆ ಹೋದರು

ಅರಮನೆಯಲ್ಲಿ ಶ್ರೀಮಂತರು ಬಹಳ ಜನ ಬಂದಿದ್ದರು. ಅವರೆಲ್ಲ ಥಳಥಳಿಸುವ ಬಟ್ಟೆಗಳನ್ನೂ ಒಡವೆಗಳನ್ನೂ ಹಾಕಿಕೊಂಡು ಬಂದಿದ್ದರು. ಅವ್ವೆಯಾರು ಸಾದಾ ನೀಲಿ ಸೀರೆ ಉಟ್ಟು ಬಂದಿದ್ದರು ಅವ್ವೆಯಾರಿಗೆ ಯಾರಿಗೂ ಇಲ್ಲದ ಮರ್ಯಾದೆ ಆಯಿತು—ರಾಣಿಯವರು ಮಗುವನ್ನು ತಂದು ಅವ್ವೆಯಾರ ಮುಂದೆ ಹಿಡಿದರು ಮರೆತೇಬಿಟ್ಟೆ! ಏನನ್ಯಾಯ? ನಿನಗೆ ಹೇಳಲೇ ಇಲ್ಲ! ಸಿಟ್ಟಾಗಬೇಡ ಪುಟ್ಟಣ್ಣಾ! ಆ ದಿನ ಅರಸನ ಪುಟ್ಟಾಣಿ ಕೂಸನ್ನು ತೊಟ್ಟಿಲಿಗೆ ಇಡುವ ಸಂಭ್ರಮ—ನಾಮಕರಣ! ಆಗ ಆ ಮಗುವನ್ನು ನೋಡಿ ಅವ್ವೆಯಾರು, 'ವರಪ್ಪುಯರ' 'ವರಪ್ಪುಯರ', 'ವರಪ್ಪುಯರ!' ಹೀಗೆ ಮೂರು ಬಾರಿ ಹೇಳಿ ಆರತಿ ತಟ್ಟೆಯಲ್ಲಿ ಬೆರಳು ಅದ್ದಿದರು. ಮಗುವಿಗೆ ತಿಲಕ ಇಟ್ಟರು. ಇನ್ನೊಂದು ಸಾರಿ ಬೆರಳು ಅದ್ದಿದರು. ಕುಂಕುಮದ ನೀರಿನಲ್ಲಿ ಅರಮನೆಯ ಗೋಡೆಯ ಮೇಲೆ 'ವರಪ್ಪುಯರ' ಎಂದು ಬರೆದರು. ಮೇನದಲ್ಲಿ ಕುಳಿತು ಹೊರಟೇ ಹೋದರು.

'ವರಪ್ಪುಯರ' 'ರಾಣಿ'ಯು ರಾಜನ ಮುಖವನ್ನು ನೋಡಿದಳು.

'ವರಪ್ಪುಯುರ!' ದಾಸಿಯರು ನೆರೆದ ಎಲ್ಲಾ ಹೆಂಗಸರನ್ನೆಲ್ಲಾ ಕೇಳಿದರು. 'ವರಪ್ಪುಯುರ!' ಎಂಥಾ ಆಶೀರ್ವಾದ! ಎಂದು ಮಂತ್ರಿಯು ಬೇಜಾರು ಮಾಡಿಕೊಂಡನು. 'ವರಪ್ಪುಯುರ!' ಪಂಡಿತರೆಲ್ಲ ಪುಸ್ತಕಗಳನ್ನು ತಿರುವಿ ಹಾಕಿದರು ಅಯ್ಯೋ! ಹೆಣ್ಣೇ ಏನು ಕೆಲಸ ಮಾಡಿದೆಯೆ? ಬೇರೆ ಏನೆನೂ ಮಾತಿರಲಿಲ್ಲವೆ? ಇದೆಂಥ ಆಶೀರ್ವಾದ? 'ವರಪ್ಪುಯುರ'—ಎಂದರೆ 'ಬದು ಬೆಳೆಯಲಿ!' ಎಂದರ್ಥ ಮಾಡಿದರು. ಆದರೆ ರಾಜನ ಕೂಸಿಗೂ ಬದು ಬೆಳೆ ಯುವುದಕ್ಕೂ ನೆಂಟೇನು ಅಂಟೇನು? ಯಾರು ಬಲ್ಲರು? ಊರಲ್ಲೆಲ್ಲ ಇದೇ ಮಾತು ಸರಿ! ನಾಳೆ ಅವ್ವೆಯಾರ ತಲೆಯನ್ನು ತೆಗಸಿಬಿಡುತ್ತಾನೆ ರಾಜ!' ಹೀಗೆಂದು ಎಲ್ಲರೂ ಭಯಬಿದ್ದರು.

ಮಾರನೇ ದಿನ ಸೂರ್ಯನೂ ಬಲು ರೇಗಿ ಕಂಪಾಗಿದ್ದನು. ಹಕ್ಕಿ ಗಳೆಲ್ಲ ಕಾದಾಡಿ ಗದ್ದಲಮಾಡುತ್ತಿದ್ದವು ಕೋಳಿಗಳಿಗಂತೂ ನಿದ್ದೆಯೇ ಇರಲಿಲ್ಲ ರಾತ್ರಿಯೆಲ್ಲ! ಎಲ್ಲೆಲ್ಲೂ 'ವರಪ್ಪುಯುರ! ವರಪ್ಪುಯುರ'!

ಅರಮನೆಯಿಂದ ಮೇನೆ ಬಂತು ಅವ್ವಯಾರು ಆಸ್ಥಾನಕ್ಕೆ ಹೋದರು. ಅರಸನು ಮೌನ! ಮಂತ್ರಿ ನಿಶ್ಶಬ್ದ! ಸೇನಾಪತಿಯು ಎದ್ದು ಕತ್ತಿ ಹಿರಿ ದನು. ಥಳ ಥಳ ಬೆಳಕಾಯಿತು. ಸಭೆಯೆಲ್ಲ ಝಲ್ಲೆಂದಿತು—'ಅವ್ವಯಾರ್' ಅರಸರ ಮುಖವನ್ನು ನೋಡಿದಿರಾ!'

'ನೋಡಿದೆ! ನನ್ನ ಹರಕೆಯ ಫಲ!'

'ಏನದು? ಹರಕೆ!''

'ವರಪ್ಪುಯುರ!'

'ಹಾಗಂದರೇನು?' ಎಂದು ಸೇನಾಪತಿಯು ಕತ್ತಿಯನ್ನು ಝಳಪಿಸಿ ದನು. 'ಅದರರ್ಥ!' ಹೀಗೆಂದು ಮಂತ್ರಿಯು ಎದ್ದು ಕೂಗಿದನು 'ಅದೇ! ನಾವು ಕೇಳುವುದು!' ಎಂದೆದ್ದರು ಪಂಡಿತರು ಎಲ್ಲರೂ ಒಟ್ಟಾಗಿ.

'ಹಾಗೆಂದರೆ ಏನೆಂದು ಹೇಳುತ್ತೇನೆ, ಮಂತ್ರಿಯೆ! ಲಾಲಿಸಬೇಕು! ಸೇನಾಪತಿಯೇ ಕತ್ತಿಯನ್ನು ಒರೆಯಲ್ಲಿಡು. ಮಂತ್ರಿಯೆ ಮಂಡಿಸು. ಪಂಡಿ ತರೇ ಲಾಲಿಸಿರಿ.' ಹೀಗೆಂದು ಹೇಳಿ ಎಲ್ಲರನ್ನೂ ಸಮಾಧಾನಪಡಿಸಿ ಅವ್ವೆ ಯಾರು ಹರಕೆಯನ್ನು ಪೂರ್ತಿಮಾಡಿದರು.

‘ ವರಪ್ಪುಯರ ನೀರುಯರಂ
ನೀರುಯರ ನೆಲ್ಲುಯರಂ
ನೆಲ್ಲುಯರ ಕುಡಿಉಯರುಂ
ಕುಡಿಉಯರ ಕೋಲುಯರುಂ
ಕೋಲುಯರ ಕೋನುಯರಂ ’

[ ಇದರಲ್ಲಿ ಬಹಳ ಕನ್ನಡ ಪದಗಳಿವೆ. ಅಲ್ಲವೆ ನೋಡು. ವರಪ್ಪು (ಬದು, ಗೆದ್ದೆಯ ಬದು); ಉಯರು (ಏಳು, ಹೆಚ್ಚು); ಕುಡಿ (ಜನ, ಪ್ರಜೆ); ಕೋಲು (ರಾಜನ ಕೋಲು, ರಾಜದಂಡ); ಕೋ (ಕೋನು=ರಾಜನು)— ಅರ್ಥವಾಯಿತೇನು ? ಇದನ್ನು ಗಟ್ಟಿಮಾಡಿಕೊಂಡು ನಿನ್ನವರಿಗೆ ಹೇಳು, ಹೇಳಿಕೊಡು. ]

ಬದುವೇರೆ ನೀರೇರ್ರುಂ
ನೀರೇರೆ ನೆಲ್ಲೇರ್ರುಂ
ನೆಲ್ಲೇರೆ ಕುಳವೇರ್ರುಂ
ಕುಳವೇರೆ ಕೋಲೇರ್ರುಂ
ಕೋಲೇರೆ ಅರಸೇರ್ರುಂ

ಬತ್ತದ ಗದ್ದೆಗಳ ನಡುವೆ ಇರುವ ದಿಂಡಿಗೆ ಬದು ಅಥವ ವರಪ್ಪು ಎಂದು ಹೆಸರು. ಈ ವರಪ್ಪು ಏರಲು ನೀರು ಏರಿ ನೆಲ್ಲು ಹೆಚ್ಚಾಗಿ ಬೆಳೆಯುತ್ತದೆ. ಹೆಚ್ಚಾಗಿ ನೆಲ್ಲು ಬೆಳೆದರೆ ಕುಳ ಎಂದರೆ ರೈತನು ಹಣವಂತನಾಗುತ್ತಾನೆ. ಹಣವಂತರಾದ ಕುಳಗಳು ರಾಜನ ಶಕ್ತಿಯನ್ನು ಹೆಚ್ಚಿಸುತ್ತಾರೆ. ಆದ್ದರಿಂದ ಗದ್ದೆಯ ಬದುವೇರಲಿ ಎಂದು ಅವ್ವೆಯಾರು ಹರಸಿದ್ದರು. ಹೊಲದಿಂದ ಪ್ರಜೆ ! ಪ್ರಜೆಯಿಂದ ರಾಜ ! ಇದಕ್ಕಿಂತ ಇನ್ನೆಂಥ ಹರಕೆಯು ಬೇಕಾಗಿದ್ದೀತು—ರಾಜನ ಮಗುವಿಗೆ—ಹರಕೆ ?

ರಾಜನು ಎದ್ದು ನಿಂತನು. ಕೊರಳಿಂದ ಹಾರವನ್ನು ತೆಗೆದನು. ಸಿಂಹಾಸನವನ್ನು ಇಳಿದು ಬಂದನು. ಅವ್ವೆಯಾರಿಗೆ ಅಡ್ಡಬಿದ್ದನು. ಹಾರವನ್ನು ಕೈಲಿಟ್ಟನು. ಮಂತ್ರಿ, ಸೇನಾಪತಿ, ಕವಿಗಳು, ಪಂಡಿತರು ಎಲ್ಲರೂ ‘ ವರಪ್ಪುಯರ ’ ಎಂದು ಕೂಗಿದರು. ಅಂದಿನಿಂದ ಅವ್ವೆಯಾರಿಗೆ ಎಲ್ಲೆಲ್ಲೂ ನಮಸ್ಕಾರಗಳ ಸುರಿಮಳೆ. ಮರೆಯಬೇಡ—‘ ವರಪ್ಪುಯರ ! ’

——

# ಗುಣ

ಒಂದಾನೊಂದು ಕಾಲ. ಆಗ ಒಂದಾನೊಂದು ದೇಶದಲ್ಲಿ ಒಬ್ಬಾನೊಬ್ಬ ರಾಜನು ಆಳುತ್ತ ಇದ್ದನು. ಆ ರಾಜನಿಗೆ ಬಹಳ ದಿನಗಳ ನಂತರ ಒಬ್ಬಳೇ ಒಬ್ಬಳು ಮಗಳು ಹುಟ್ಟಿದಳು. ಆ ಅರಸುಮಗಳಿಗೊ ಒಲು ಉಪಚಾರ. ರಾಜನೋ ನೆಲ ಮುಟ್ಟಿಸಲೊಲ್ಲ. ಹೀಗೇ ಬೆಳೆದಳು ಆ ಕುಮಾರಿ. ಪ್ರಪಂಚದ ಒಳ್ಳೆಯ ವಸ್ತುಗಳೆಲ್ಲವೂ ಅವಳಿಗೇ ಮೀಸಲಾಗಿ ಬರುತ್ತಿದ್ದವು. ಹೂವಿನ ಎಣ್ಣೆ ಅವಳಿಗೆ, ಜೇನಿನ ತುಪ್ಪ ಅವಳಿಗೆ, ಖರ್ಜೂರ ಬದಾಮಿ ಅವ-

ಳಿಗೆ, ಆಡುವ ನವಿಲು ಅವಳಿಗೆ, ಮಾತಾಡುವ ಗಿಣಿ ಅವಳಿಗೆ. ಅವಳೋ ಅರಸುಕುಮಾರಿ ಹೀಗಾಗಿ ಬಹು ಸುಂದರಳಾಗಿ ಬೆಳೆದಳು

ಹೀಗೆಯೇ ಒಂದಾನೊಂದು ದಿನ ಆ ಅರಸು ಎಲ್ಲ ದೇಶಗಳ ರಾಜರನ್ನೂ ವಿದ್ವಾಂಸರನ್ನೂ ಕರೆಸಿದನು. ಎಲ್ಲರ ಎದುರಿನಲ್ಲಿ ತನ್ನ ಮಗಳನ್ನು ಸಹ ಕರೆಸಿ ಕುಣಿತ ಮಾಡಿಸಿದನು.

ಅಂಥ ಸುಂದರ ಹೆಣ್ಣು ನೆಲ ಮುಟ್ಟಿಯಾಳೆ? ಅವಳು ನಿಜವಾಗಿಯೂ ಮನುಷ್ಯಳೇ? ಅವಳು ನಮ್ಮಂತೆ ಉಸಿರಾಡುತ್ತಾಳೆಯೇ? ಹೀಗೆಯೇ ನಮ್ಮಂತೆ ಆಹಾರ ತೆಗೆದುಕೊಳ್ಳುವಳೆ? ಇಂತೆಲ್ಲ ಪ್ರಶ್ನೆ ಮಾಡುತ್ತ ಬಲು ಮಂದಿ ನೆರೆದರು. ಎಲ್ಲರೂ ಅವಳ ದನಿ ಕೇಳಿ ನಿಶ್ಶಬ್ದರಾದರು! ಅವಳ ಮಾತು ಕೇಳಿ ಮೂಕರಾದರು! ಮತ್ತು ರೂಪ ನೋಡಿ ಇನ್ನೇನನ್ನೂ ನೋಡುವುದೇ ಇಲ್ಲವೆಂದು ಕಣ್ಣು ಮುಚ್ಚಿಕೊಂಡು ನಡೆದುಬಿಟ್ಟರು.

ಇಂಥಾ ಸಮಯದಲ್ಲಿ ಒಂದು ಅಚಾತುರ್ಯ ನಡೆಯಿತು. ಅದೇನು? ಅಲ್ಲಿಗೆ ಒಬ್ಬ ಗಡ್ಡದ ಜೋಗಿ ಬಂದಿದ್ದನು. ಅವನು ಮಾತ್ರ ಆ ಅರಸಿನ ಮಗಳಿಗೆ ತಲೆಬಾಗಲಿಲ್ಲ. ನಕ್ಕು ನಲಿಯಲಿಲ್ಲ ಮತ್ತೋ ಆ ಕಡೆ ನೋಡಲೇ ಇಲ್ಲ! ಅರಸು ಕುಮಾರಿ ಹಾಗೇ ನೋಡಿ ಬೆರಗಾದಳು. ಮತ್ತೆ ಸ್ವಲ್ಪ ಹೊತ್ತಿನಲ್ಲಿಯೇ ಮಾನ ಕಳಕೊಂಡವಳಂತೆ ಅತ್ತುಬಿಟ್ಟಳು

'ಅಪ್ಪಾಜೀ! ನನ್ನ ರೂಪ ಲಾವಣ್ಯ ಯಾತಕ್ಕಾಗಿದ್ದೀತು? ಅಪ್ಪಾಜೀ! ಆ ಜೋಗಿ ನನಗೆ ತಲೆಬಾಗಲಿಲ್ಲ. ನಾಳೆ ನಾನು ತಲೆಯೆತ್ತಿ ತಿರುಗುವುದು ಹೇಗೆ? ಅಪ್ಪಾಜೀ, ನಾನು ಮುಂದೆ ರಾಣಿಯಾಗುವುದು ತಾನೇ ಹೇಗೆ?'

ಹೀಗೆ ಆ ರೂಪವತಿ ಅಳುತ್ತಿದ್ದಾಗ್ಗೆ ಆ ಜೋಗಿ ಹೇಳಿದ್ದೇನು?—

'ಸುಮ್ಮನೆ ಅತ್ತರೇನು ಬಂತು. ನಾನೆಂದೆಂದೂ ಬರೀ ರೂಪಲಾವಣ್ಯಕ್ಕೆ ಬೆರಗಾಗುವುದೂ ಇಲ್ಲ, ತಲೆ ಬಾಗುವುದೂ ಇಲ್ಲ. ಅದೆಲ್ಲ ಸುಳ್ಳು ಮಾತು!'

ಹೀಗೆ ಹೇಳಿ ಆತ ದಿಗ್ಗನೆ ಎದ್ದು ಹೊರಟೇ ಹೋದನು.

ಆದಿನವೇ ಆ ಅರಸು ತನ್ನ ಆಸ್ಥಾನದವರನ್ನೆಲ್ಲ ಬರಮಾಡಿಸಿದನು. ಎಲ್ಲರನ್ನೂ ವಿಚಾರಿಸಿದನು. ಹಾಗಾದರೆ ರಾಣಿಯಾಗುವ ಅರಸು ಕುಮಾರಿಗೆ ಲಾವಣ್ಯವಲ್ಲದೆ ಇನ್ನೇನಿರಬೇಕು? ಕಡೆಗೆ ತೀರ್ಮಾನಿಸಿದರು.—

'ಲಾವಣ್ಯಕ್ಕೆ ಮರ್ಯಾದೆ ಬರಬೇಕಾದರೆ ವಿದ್ಯೆ ಇರಬೇಕು!'

ಸರಿ, ಮೂರನೆ ದಿನದಿಂದ ಪಾಠ ಪ್ರವಚನಗಳಿಗೆ ಆರಂಭವೇ. ಪಂಡಿತರುಗಳ ಸಮಾರಂಭ ರಾಜಕುಮಾರಿಯು ದೃಢಮನಸ್ಸು ಮಾಡಿ ನಿಂತು ಬಿಟ್ಟಳು. ಆಹಾರ ನಿದ್ರೆ ತೊರೆದಳು. ವಿದ್ಯೆಗಾಗಿ ಆತುರ ಅಷ್ಟು!

ದೇಶ ದೇಶಾಂತರದ ಉಪಾಧ್ಯಾಯರೆಲ್ಲ ಬಂದು ಓದಿಸಿ, ಕಲಿಸಿ, ಬರೆಸಿದರು ಯಾವ ಯಾವುದೋ ಭಾಷೆಗಳೆಲ್ಲ ಕಲಿತಾಯ್ತು. ಸಂಸ್ಕೃತ ಗಿಳಿಪಾಠ ಗಣಿತ ನೀರು ಕುಡಿದಂತೆ. ವ್ಯಾಕರಣ ಲೀಲಾಜಾಲ. ಜ್ಯೋತಿಷ್ಯ ಹೇಳಿದ್ದೇ ಸತ್ಯ. ಕಾವ್ಯ ಕನಸಿನಲ್ಲಿಯಾದರೂ ಸರಿ! ಹೀಗೇ ಎಲ್ಲವೂ ಅರಿವಾಯ್ತು

ಅರಸು ಮತ್ತೆ ಚಪ್ಪರ ಜಿಗಿಸಿ, ತೋರಣ ಕಟ್ಟಿಸಿ, ಸಭೆ ಸೇರಿಸಿದನು. ಬಹು ಜನರು ಬಂದರು ಎಲ್ಲರೂ ಮನಸೋತರು—ಆ ವಾಕ್ಸರಣಿ, ಆ ಅಲಂಕಾರ, ಆ ಮಾತಿನ ವೈಖರಿ ಮತ್ತು ಶಾಸ್ತ್ರಪರಿಚಯಗಳನ್ನೆಲ್ಲ ಕಂಡು. ಕೇಳಿದವರೆಲ್ಲ ಹೇಳಿದರು—ಕಪಿಲ, ಕಣಾದ, ಚರಕ, ಮಾಘ, ಮೈತ್ರೇಯಿ ಇವರೆಲ್ಲರ ಒಟ್ಟು ಅವತಾರವೇ ಈ ರಾಜಕುಮಾರಿ! ಸರಿ ಇಂಥಾ ರಾಣಿ ಇನ್ನೆಲ್ಲಿರುವಳು?—ಹೀಗಲ್ಲ ಜನರೆಂದಾಗ, ಆ ರಾಣಿಯಾಗುವ ಹುಡಿಗಿ ಸುತ್ತ ನೋಡಿದಳು.

'ಅಪ್ಪಾಜೀ, ಆ ಗಡ್ಡದ ಜೋಗಿ ಎಲ್ಲಿ? ತಲೆ ತಪ್ಪಿಸಿಕೊಂಡಿರಬಹುದು—ಕರಸು ಈಗ! ಇನ್ನಾದರೂ ತಲೆ ಬಾಗುವನೋ ಇಲ್ಲವೋ ಕೇಳಿಬಿಡುತ್ತೇನೆ ಜನರೆಲ್ಲರೂ ಈಗ ನನ್ನನ್ನು ಸಾಕ್ಷಾತ್ ಸರಸ್ವತಿ ಎನ್ನುವರು. ಆತನದೇನು ಬಿಸಾತು? ಆದರೂ, ಕರೆಸು; ಬಂದು ನಿಂತು ತಲೆಬಾಗಿ, ನಾಚಿ, ನೆಲಕ್ಕೆ ಒರಗಲಿ!'

ಅಷ್ಟು ಹೊತ್ತಿಗೆ ಜನರೆಲ್ಲ ಗುಸುಗುಟ್ಟಿದರು. ದಾರಿ ಬಿಟ್ಟರು. ಅಗೊ ಅದೇ ಗಡ್ಡದ ಜೋಗಿ! ಎದುರಿಗೆ ಅಲ್ಲೇ ಬಂದನು. ನಿಂತನು—'ರಾಜಕುಮಾರಿ ಯಾರು? ನಮ್ಮ ಶಾಂತಿ-ನಾಡಿಗೆಲ್ಲ ರಾಣಿಯಾಗುವ ಹೆಮ್ಮೆ ಯಾರದ್ದು! ಎಲ್ಲಿರುವಳಾಕೆ?'—ಎಂದು ಜಗ್ಗಿಸಿ ಕೇಳಿ ನಿಂತನು

ಆಗ ರಾಜಕುಮಾರಿಯು—'ಅಪ್ಪಾಜೀ, ಯಾಕೆ ಸುಮ್ಮನಿದ್ದೀರಿ? ಕರೆಸಿರಿ ಹೊಗಳು-ಭಟ್ಟರನ್ನು ಕರೆಸಿರಿ ಪಂಡಿತರನ್ನು. ಅವರೆಲ್ಲರೂ ಒಟ್ಟಾಗಿ ನನ್ನ ವಿದ್ಯೆಯ ಗರ್ವವನ್ನು ಹೊಗಳಿ'ಹೇಳಲಿ! ಆಗ ಆತ ತಲೆ ಬಗ್ಗಿಸಲೇ

ಬೇಕು—' ಎಂದು ಹೇಳಿದಳು. ಅವಳ ದಿಟ್ಟತನವನ್ನು ಕಂಡು ಪಂಡಿತರ ಮಾತು ಜೋರಾಯಿತು. ಮತ್ತು ಹೊಗಳು-ಭಟ್ಟರ ಕೂಗು ಜೋರಾಯಿತು.

ಆ ಜೋಗಿಯು ಎಲ್ಲ ವಿಚಾರವನ್ನೂ ಕೇಳಿದನು ಆದರೆ ಇನ್ನೇನೂ ಮಾಡದೆ, ತಲೆಯನ್ನೂ ಬಾಗಿಸದೆ, ಹೀಗೆ ಹೇಳಿದನು: 'ಇಷ್ಟೇನೇ, ಆಗ ಲಾವಣ್ಯದ ಹೆಮ್ಮೆ ! ಈಗ ವಿದ್ಯೆಯ ಗರ್ವ ! ಛೇ ! '

ಮತ್ತೆ ಆ ಜೋಗಿ ಅಲ್ಲಿ ನಿಲ್ಲಲಿಲ್ಲ ರಾಜಕುಮಾರಿಯು ನೆಲದಲ್ಲಿ ಕುಸಿದುಬಿದ್ದಳು. ಅರಮನೆಯ ದಾಸದಾಸಿಯರು ಕಣ್ಣೀರಿಟ್ಟರು.

ಈ ಬಾರಿಗೆ ರಾಜನಿಗೆ ಸಮಾಧಾನ ಹೇಳಲು ಶಕ್ತಿ ಇರಲಿಲ್ಲ ಮಂತ್ರಿಗಳಿಗೆಲ್ಲ ನಡುಕ ಹತ್ತಿತು. ಹೊಗಳು-ಭಟ್ಟರು ದಾರಿಬಿಟ್ಟರು. ರಾಜಕುಮಾರಿಯು ಎಂದಿನಂತೆ ಅಲಂಕಾರಗಳನ್ನೆಲ್ಲ ತೊರೆದುಬಿಟ್ಟಳು ತಿಂಡಿಯ ಮೇಲಣ ಆಶೆ ಇಲ್ಲವಾಯಿತು ವಿದ್ಯೆಯ ಮೇಲಣ ಹಂಬಲ ಸಹ ಮಾಯವಾಯಿತು.

ಒಡನಾಡಿ:- ರಾಜಕುಮಾರಿ, ಇದೊ ಸುಗಂಧಲೇಪನ.

ಕುಮಾರಿ:- ಆಕಡೆ ತೆಗೆದಿಡು.

ಪರಿಚಾರಿಕೆ:- ಯುವರಾಣಿ, ಇದೊ ಚೀನೀ ಚೀನಾಂಬರ.

ರಾಜಕುಮಾರಿ:- ನಾನು ಉಟ್ಟಿರುವ ಈ ಬಿಳಿ ಸೀರೆಯೇ ಸಾಕು. ಅಟ್ಟಹಾಸದ ಅರಿವೆ ನನಗಲ್ಲ.

ರಾಜ:- ಮುದ್ದು ಮಗಳೆ ! ಇಲ್ಲಿವೆ ಸವಿಯೂಟದ ರಸಕವಳಗಳು.

ರಾಜಕುಮಾರಿ:- ನನ್ನಲ್ಲಿಗೆ ಅವನ್ನು ತರಬೇಡಿರಿ ಅಪ್ಪಾಜೀ ! ನಮ್ಮ ರಾಜ್ಯದ ಬಡ ಜನರೆಲ್ಲ ಅದೇನು ತಿನ್ನುವರೋ ಆ ಅಂಬಲಿಯನ್ನಿಷ್ಟು ತಂದು ಕೊಡಿರಿ.

ರಾಜ:- ಪಟ್ಟದ ಮಗಳೇ ! ನೆರೆ ರಾಜರ ಮಕ್ಕಳೆಲ್ಲ ಬಂದು ಕಾದಿರುವರು. ಅವರೊಡನೆ ಆಟವಾಡಲು ಎದ್ದು ಬಾ.

ರಾಜಕುಮಾರಿ:- ಇಲ್ಲ. ಬರಲೊಲ್ಲೆ, ನಮ್ಮ ರಾಜ್ಯದ ಬಡ ಮಕ್ಕಳ ಸಂಗಡ ಆಟವಾಡಲು ನನಗೆ ಇಷ್ಟ. ಅವರೆಲ್ಲ ಇಲ್ಲಿಗೆ ಬರಲಿ, ಅರಮನೆಯ ಬಾಗಿಲು ತೆರೆಯಿರಿ !

ಹೀಗೆ ರಾಜಕುಮಾರಿಯು ವಿಚಾರಪರಳಾಗಿ ಬೆಳೆ ಬೆಳೆಯುತ್ತ, ತನ್ನ ನಾಡಿನ ಉಡಿಗೆ, ತೊಡಿಗೆ, ಆಹಾರ, ವ್ಯವಹಾರಗಳನ್ನೇ ಸಾಧಿಸುತ್ತ ಬಂದಳು. ತಬ್ಬಲಿ ಮಕ್ಕಳಿಗೆ ಮನೆ ಮಠ ಕಟ್ಟಿಸಿಕೊಟ್ಟಳು. ತಾಯಿಯಿಲ್ಲದ ಮಕ್ಕಳಿಗೆ ತಾನೇ ತಾಯಿಯಾದಳು. ಕಾಯಿಲೆ ಬಿದ್ದವರಿಗೆಲ್ಲ ಹೆಮ್ಮೆಯಿಂದ ವೈದ್ಯಳಾದಳು. ಗತಿಯಿಲ್ಲದವರಿಗೆಲ್ಲ ತಾನೇ ದಿಕ್ಕಾದಳು. ಪ್ರಜೆಗಳ ಸೇವೆಯೇ ಕರ್ತವ್ಯ, ಆ ಸೇವೆಯ ಫಲವೇ ತನಗೆ ಪುಣ್ಯ, ಅವರ ತೃಪ್ತಿಯೆ ತನಗೆ ಹೊಗಳಿಕೆ. ಹೀಗೆ ಆ ಕುಮಾರಿಯು ಬೆಳೆದಳು.

ಈ ವೇಳೆಗೆ ರಾಜನು ಬಿಳಿಗೂದಲನ್ನು ಪಡೆದನು. ಕೈಕಾಲು ತ್ರಾಣ ತಪ್ಪುತ್ತ ಬಂದವು. ರಾಜಕುಮಾರಿಯಾದರೊ ಯಾವ ರಾಜನನ್ನೂ ಸಹ ಮದುವೆಯಾಗಳು. ಪಟ್ಟದ ರಾಣಿಯಂತೆ ಸಿಂಹಾಸನವನ್ನಾದರೂ ಹತ್ತು ವಲ್ಲಳು.

ಜನರೆಂದರು: 'ಆ ಜೋಗಿಗಾಗಿ ಕಾದಿದ್ದಾಳೆ ರಾಜಕುಮಾರಿ. ಆತನು ಬಂದು ಮೆಚ್ಚಿ ಹೊಗಳಿದರೆ, ಎಲ್ಲ ಸರಿಯಾದೀತು. ನಮ್ಮೆಲ್ಲರ ಬಾಳು ನೇರವಾದೀತು. ಎಲ್ಲಿದ್ದಾನು ಆ ಜೋಗಿ? ಯಾಕ ಬರವಲ್ಲ!'

ಈ ಸಮಯಕ್ಕೆ ಸರಿಯಾಗಿ ಒಂದು ದಿನ ಆ ಜೋಗಿ ಬಂದನು. ಊರ ವರು ಮತ್ತು ನಾಡವರೆಲ್ಲ ಸೇರಿದರು. ವೃದ್ಧನಾದ ರಾಜನು ಸಿಂಹಾಸನ ದಲ್ಲಿ ಕುಳಿತನು. ರಾಜಕುಮಾರಿಯು ತಂದೆಯ ಕಾಲೊತ್ತುತ್ತ ನೆಲದ ಮೇಲೆ ಕುಳಿತಳು. ಸಭೆಯು ತುಂಬಿಬಂದಿತ್ತು.

ಆ ಜೋಗಿಯು ಬಂದು ನಮಸ್ಕರಿಸಿದನು. ಆತನೇ ಮತ್ತೆ ಹೇಳಿದನು ಹೀಗೆಂದು: 'ರಾಜಕುಮಾರೀ, ನೀನೀಗ ನಿಜವಾದ ಮಗಳು ನಿಮ್ಮ ತಂದೆ ಯಾದ ರಾಜನಿಗೆ! ರಾಜಪುತ್ರಿ, ನೀನೀಗ ನಿಜವಾದ ನಾಡತಾಯಿ! ಇದೊ ಈಗ, ಈ ದಿನ ಈ ಸಭೆಯ ಎದುರಲ್ಲಿ ನಿನಗೆ ತಲೆಬಾಗುತ್ತೇನೆ. ನಿನ್ನ ಲಾವಣ್ಯಕ್ಕಲ್ಲ, ನಿನ್ನ ವಿದ್ಯೆಗಲ್ಲ, ಆದರೆ ನಿನ್ನ ಕಾರುಣ್ಯಕ್ಕೆ! ಇದೊ ಮತ್ತೆ ನಿನಗೆ ನಮಸ್ಕಾರ!'

ಆ ಮಾತೆಲ್ಲ ಕೇಳಿದ ರಾಜಕುಮಾರಿಯು ಮೌನದಿಂದ ಕುಳಿತೇ ಇದ್ದಳು. ತಂದೆಯ ಮೋರೆಯನ್ನು ನೋಡಿ ಮುಗುಳು-ನಗೆ ಬೀರಿದಳು. ಆಗ ಆ ವೃದ್ಧನಾದ ರಾಜನು ಕೇಳಿದನು: 'ಎಲೈ, ನೀನಾರು? ಜೋಗಿಯೋ?

ಅಥವಾ ವೇಷಧಾರಿಯಾದ ಗುಪ್ತಚಾರನೊ? ಈಗಲಾದರೂ ಹೇಳು. ನಿನ್ನಿಂದ ನನ್ನ ಮಗಳು ನಿಜವಾದ ರಾಜಗುಣಗಳನ್ನು ಪಡೆದುಕೊಂಡಳಯ್ಯಾ! ನೀನೇ ಅವಳಿಗೆ ಸರಿಯಾದ ಗುರು!'

ಆಗ ಆ ಜೋಗಿಯು ತನ್ನ ಗಡ್ಡವನ್ನು ಕಿತ್ತೊಗೆದು, ಹೀಗೆಂದನು: 'ಎಲೈ ರಾಜನೆ, ನಾನೊಬ್ಬ ಮಂತ್ರಿಯು ನಿಮ್ಮ ನಾಡಿಗೆ ಅತಿ ಸಮೀಪದಲ್ಲಿ ಇರುವ ಕಾಂತಿನಾಡಿಗೆ ನಾನೇ ಮಂತ್ರಿಯು. ನಿನ್ನ ಮಗಳ ಗುಣಗಳನ್ನು ಕೇಳಿ ನಮ್ಮ ರಾಜಮಾತೆಯವರು ಇದೋ ಈ ಜವಾಹಿರಿ ಪೆಟ್ಟಿಗೆಯನ್ನು ಕಳಿಸಿದ್ದಾರೆ. ಇದನ್ನು ಸ್ವೀಕರಿಸಿ ನಮ್ಮೊಂದಿಗೆ ಸ್ನೇಹವನ್ನು ಬೆಳೆಸಿರಿ.'

ಜವಾಹಿರಿ ಪೆಟ್ಟಿಗಯು ಬಹು ದೊಡ್ಡದು, ಬಹು ಸುಂದರ. ಅದರ ಬಾಗಿಲನ್ನು ಕುತೂಹಲದಿಂದ ರಾಜಕುಮಾರಿಯೆ ತೆರೆದಳು. ಆಗ ಅದರೊಳಗಿನಿಂದ ಆಶ್ಚರ್ಯ ಆಶ್ಚರ್ಯ! ಕಾಂತಿನಾಡಿನ ರಾಜನೇ ಎದ್ದು ನಿಂತು ರಾಜಕುಮಾರಿಯ ಕೊರಳಿಗೆ ಹಾರ ಹಾಕಿಬಿಟ್ಟನು. ಏನು ಕೋಲಾಹಲ!

ಅಂತು, ಎರಡು ನಾಡೂ ಒಂದಾದವು, ಕಾಂತಿನಾಡು ಶಾಂತಿನಾಡು!

ಆಗ ಮಂತ್ರಿ ಹೇಳಿದನು ಹೀಗೆಂದು:

ತನ್ನ ರೂಪಿನಿಂದ,
ಬಣ್ಣ ಬಟ್ಟೆಯಿಂದ,
ದೊಡ್ಡವರಾದವರಿಲ್ಲ,
ದೊಡ್ಡವರಾಗುವರಿಲ್ಲ!
ಒಳ್ಳೆ ಗುಣದಿಂದ,
ಒಳ್ಳೆ ಕಾರ್ಯದಿಂದ,
ದೊಡ್ಡವರಾದವರೆಲ್ಲ,
ದೊಡ್ಡವರಾಗುವರೆಲ್ಲ!

ಆದ್ದರಿಂದ ನಾನು ಹೇಳುವುದು ಇಷ್ಟೆ—ಗುಣ ಮುಖ್ಯ! ಹೂವಿನಲ್ಲಿ ಪರಿಮಳ ಹುಡುಕುವೆವು. ಹಾಗೇ ಮಕ್ಕಳಲ್ಲಿ ಒಳ್ಳೇ ಗುಣಗಳನ್ನು ಹುಡುಕುವೆವು. ಆದ್ದರಿಂದ ಮಕ್ಕಳು ಏನನ್ನು ಸಂಪಾದಿಸಬೇಕು? ನೀವೇ ಹೇಳಿಬಿಡಿರಿ!

---

## ಮಸೀದಿಯನ್ನು ಎಲ್ಲಿ ಕಟ್ಟಿದರು ?

ರಹೀಂ:—ಎಚ್ಚರವಾಗಿದ್ದೀಯ ಗುಲಾಬಿ? ಹುಡುಗರೆಲ್ಲ ಮಲಗಿದ್ದಾರೆಯೆ ?

ಗುಲಾಬಿ:—ಏನು ವಿಚಾರ? ಎಲ್ಲರೂ ಸುಖವಾಗಿ ಮಲಗಿ, ಕನಸು ಕಾಣುತ್ತಿದ್ದಾರೆ.

ರಹೀಂ:—ಒಳ್ಳೇ ಕನಸು ! ಗುಲಾಬೀ, ಕನಸು !

ಗುಲಾಬಿ:—ಅದೇನು ಹೇಳಿರಿ ! ಏನು ಕನಸು ? ಒಳ್ಳೆಯ ಕನಸಾದ ದಿನ ಒಳ್ಳೆಯ ಕೆಲಸ ಮಾಡಬೇಕಂತೆ ! ಕನಸೇನು ?

ರಹೀಂ:—ಅಣ್ಣ ಕರೀಮನ ಮನೆಗೂ ನಮ್ಮ ಮನೆಗೂ ನಡುವೆ ಕಲೀಫರು ಬಂದು ನಿಂತು ಮಸೀದಿ ಕಟ್ಟಿಸುತ್ತ ನಿಂತಿದ್ದರು. ಎಂಥಾ ಬಂಗಾರದಂಥ ಕನಸು !

ಗುಲಾಬಿ:—ಆಹಾ! ಏನು ಕನಸು ! ನಾನು ಇದ್ದೆನೆ ಅಲ್ಲಿ ? ನಿಮ್ಮ ಕನಸಿನಲ್ಲಿ ?

ರಹೀಂ:—ನೀನಿದ್ದಂತೆ ನೆನಪಿಲ್ಲ, ಮುಂದೆ ಕೇಳು. ಕಟ್ಟಿ ಮುಗಿದ ಮೇಲೆ ನಮಾಜು ಮಾಡಲು ಕರೆಯುತ್ತಿದ್ದರು ಎಷ್ಟೋ ಜಾರಿ ಜನರು ಕೂಡಿ ಬೇಡಿ ಮನೆಗೆ ನಡೆದರು ಇನ್ನೂ ಕರೆಯುತ್ತಿರುವರು ಪ್ರಾರ್ಥನೆಗೆ ...

ಗುಲಾಬಿ:—ಹಾಗಾದರೆ ಹೋಗಿ....

ರಹೀಂ:—ಎಲ್ಲ ಕನಸಿನಲ್ಲಿ ಎಂದೆನಲ್ಲವೆ ? ಹಾಗಾದರೂ ನನ್ನ ಕಿವಿಯಲ್ಲಿ ಕೂಗು ಕೇಳಿಸುತ್ತದೆ 'ಆಮೀನ್ ! ಆಮೀನ್ ! ಆಮೀನ್ ! '

ಗುಲಾಬಿ:—ಎಂಥಾ ಕನಸು !

ರಹೀಂ:—ಈ ದಿನ ಏನಾದರೂ ಒಳ್ಳೆಯ ಕೆಲಸ ಮಾಡಲೇಬೇಕು.

ಗುಲಾಬಿ:—ಏನು ಮಾಡುವಿರಿ ? ಯಾವುದಕ್ಕೂ ಬೆಳಗಾಗಬೇಡವೆ ?

ಇಲ್ಲ, ಬೆಳಗಾಗಬೇಕಾದುದೇ ಇರಲಿಲ್ಲ ಆಗಲೆ ಮಾಡಬಹುದಾಗಿತ್ತು ಆ ಒಳ್ಳೆಯ ಕೆಲಸವನ್ನ ರಹೀಂಸಾಹೇಬನ ಅಣ್ಣನೇ ಕರೀಂಸಾಹೇಬ ಆತನಿಗೆ ಹೆಂಡತಿ, ಮಗಳು, ಮಗ, ಯಾರೂ ಇರಲಿಲ್ಲ ಒಳ್ಳೆಯ ಕೆಲಸ ಏನು ಮಾಡಬೇಕಾದರೂ ಸರಿ, ಇಂದೇ ಮಾಡಿಬಿಡಬೇಕು. ಅದೂ ಸಹ ಕರೀಂಸಾಹೇಬನ ಪರವಾಗಿ ಏನಾದರೂ ಒಳ್ಳೆಯದನ್ನು ಮಾಡಬೇಕು.

ಗುಲಾಬಿ —ನಿಮ್ಮ ಅಣ್ಣಾ ಕರೀಂಸಾಹೇಬರು ಮುದುಕರಾಗುತ್ತ ಬಂದರು. ಕೈಲಿ ಸಾಗದೋ ಏನೋ !

ರಹೀಂ:—ಹೌದು; ನೋಡು ಹೊಲದ ಕೆಲಸವೂ ಸಹ ಕೈಲಿ ಸಾಗದು. ಬಾರಣ್ಣಾ ನನ್ನ ಸಂಗಡ ಇದ್ದು ಬಿಡು ಎಂದರೆ ಬರುವಲ್ಲ.

ಗುಲಾಬಿ.—ಅವರಿಗೆ ಅನುಕೂಲವಾಗುವ ಹಾಗೆ ಏನು ಮಾಡಿದರೆ ಆದೀತು ?

ರಹೀಂ.—ನಾನು ಬೆಳೆದ ಧಾನ್ಯದಲ್ಲಿ ಅರ್ಧದಷ್ಟಾದರೂ ಆತನಿಗೆ ಕೊಟ್ಟುಬಿಡೋಣವೆ ?

ಗುಲಾಬಿ:—ಕೊಡಿರಿ ಪಾಪ. ಆದರೆ ಅವರು ತೆಗೆದುಕೊಳ್ಳುವರೆ ?

ರಹೀಂ:—ಕೊಡುವ ವಿಧಾನ ಬೇರೆ ಇದೆ. ಅದನ್ನೇ ಈಗ ಬೆಳಗಾ-ಗುವ ಮುನ್ನ ಆರಂಭಿಸುತ್ತೇನೆ.

ಅದು ಬಹಳ ಗುಟ್ಟಿನ ವಿಚಾರವಾಗಿತ್ತು. ಆದ್ದರಿಂದ ಕಿವಿಯಲ್ಲಿ ಹೇಳಿದ ಗುಲಾಬಿ ಬೀಬಿಗೆ ಸಹ ಸರಿಯೆಂದು ಕಾಣಿಸಿತು. ಸರಿ ಹಾಗೇ ಮಾಡುತ್ತ ಇದ್ದನು.

ಗುಟ್ಟಿನ ವಿಚಾರವಷ್ಟೆ. ಅದನ್ನು ನಿಮಗೆ ನಾನು ಈಗ ಹೇಳಬಾರದು. ಆಮೇಲೆ ಹೇಳುತ್ತೇನೆ. ಆಗಬಹುದೊ ?

ಏನು ಆಗದೇನು ಹಟಮಾಡಿದರೆ ಇನ್ನೇನು ಗತಿ. ಹೇಳಿಬಿಡುತ್ತೇನೆ, ಕೇಳಿರಿ; ಆದರೆ ಇನ್ನೊಂದು ಬಗೆಯಾಗಿ ಸೂಚಿಸುತ್ತೇನೆ.

ಇತ್ತ ಕರೀಂಸಾಹೇಬನಿಗೆ ಕನಸಾಯಿತು. ತಮ್ಮನಾದ ರಹೀಂ ಸಾಹೇಬನ ಮಕ್ಕಳು ಮರಿಯೆಲ್ಲ ಹಸಿವು ಹಸಿವೆಂದು ಅಳುತ್ತ ಅರಚುತ್ತ

ಇದ್ದಾರೆ. ರಹೀಂಸಾಹೇಬನು ಮರಣ ಹೊಂದಿದ್ದಾನೆ. ಧಿಗ್ಗನೆ ಎದ್ದನು. ಕರೀಮನ ಮನೆಯ ಕಡೆಗೆ ಓಡಿಹೋದನು. ಇನ್ನೂ ಬೆಳ್ಳಿಚಿಕ್ಕಿ ಮೇಲೆ ಬಂದಿರಲಿಲ್ಲ. ತಮ್ಮ ಕರೀಮನ ಮನೆಯಲ್ಲಿ ಎಲ್ಲರೂ ಸುಖವಾಗಿ ಮಲಗಿದ್ದಾಗಿತ್ತು. ಹಿಂತಿರುಗಿ ಬಂದನು. ಚಾಪೆ ಹಾಸಿದನು. ಕೈಕಾಲು ತೊಳೆದು ಬಂದು ಕುಳಿತುಕೊಂಡನು ಮಂಡಿಯೂರಿದನು ಹೀಗೆ ಬೇಡಿದನು: 'ಖುದಾ! ನೀನಿಲ್ಲದ ಜಾಗವಿಲ್ಲ; ನೀನರಿಯದ ವಿಷಯವಿಲ್ಲ. ಹೀಗೆ ಕೆಟ್ಟ ಕನಸಾಯಿತು ನನ್ನ ತಮ್ಮನಿಗೆ ಕಷ್ಟ ಬರದೇ ಇರಲಿ ತಂದೆ! ಆ ಮಕ್ಕಳು ಮರಿಗಳು ಅಳುವುದನ್ನು ಕೇಳಲಾರೆ ನನ್ನ ಹೊಲದಲ್ಲಿ ಅದೆಷ್ಟು ತೆನೆ ಬಿಟ್ಟಿದೆ ಈ ವರ್ಷ ಖರ್ಜೂರದ ಫಸಲು ಇನ್ನೆಷ್ಟು ಬಂದಿದೆ ಮನೆಗೆ ತಪ್ಪುಮಾಡಿಬಿಟ್ಟೆನೋ ಏನೋ ಕಾಣೆನು ಒಳ್ಳೆಯ ಹೊಲವನ್ನೂ ಖರ್ಜೂರ ವನವನ್ನೂ ನಾನೇ ತೆಗೆದುಕೊಂಡುಬಿಟ್ಟೆನೋ ಏನೋ ಕಾಣೆನು. ಏನು ಮಾಡಲಿ ಈಗ? ನಾನೇನು ಕೊಡಹೋದರೂ ಆತನು ತೆಗೆದುಕೊಳ್ಳುವುದಿಲ್ಲ. ಆದ್ದರಿಂದ ಪ್ರಭು, ನನ್ನ ಧಾನ್ಯದಲ್ಲಿ ಅರ್ಧವನ್ನು ಅವನಿಗೆ ಕೊಟ್ಟುಬಿಡುತ್ತೇನೆ. ಎಲ್ಲರೆದುರು ಕೊಡಹೋದರೆ ತೆಗೆದುಕೊಳ್ಳುವುದಿಲ್ಲ ಆ ನನ್ನ ತಮ್ಮ ರಹೀಂ ಸಾಹೇಬ ಆದ್ದರಿಂದ ನಿತ್ಯ ಬೆಳಗಿನ ಜಾವದಲ್ಲಿ ಒಂದೊಂದು ಹೊರೆ ತೆನೆಯನ್ನೇ ಹೊತ್ತುಕೊಂಡು ಹೋಗಿ, ರಹೀಮನ ರಾಶಿಗೆ ಸೇರಿಸಿಬರುತ್ತೇನೆ ಇದೋ ಖುದಾ! ನಿನ್ನಲ್ಲಿ ಈ ಮಾತು ಮಡಗಿದೇನೆ ನಡೆಸಿಕೊಡು. ಆ ಮಕ್ಕಳು ಹಸಿದು ಅರಚುವ ಕನಸು ಮತ್ತೆ ಆಗದಿರಲಿ ತಂದೆ! ಈ ಬೇಡಿಕೆಯನ್ನು ಸಲ್ಲಿಸಿಕೊಡು.'

ಕರೀಮಣ್ಣನು ಹಿತ್ತಲಿಗೆ ಹೋಗಿ ನೋಡಿದನು. ತೆನೆಮೆದೆಯನ್ನು ಅರ್ಧ ಬೇರೆಯಾಗಿ ಮಾಡೋಣವೆಂದನು ಆದರೆ ಆ ಕತ್ತಲೆಯಲ್ಲಿ ಸಾಧ್ಯವಿರಲಿಲ್ಲ ಆ ಕೆಲಸ. ಈಗ ಒಂದು ಹೊರೆ ಹೊತ್ತುಕೊಂಡು ಹೋಗೋಣ ಎಂದು ಗೋದಿಯ ತೆನೆಗಳನ್ನು ರಾಶಿ ಮಾಡಿದ್ದ ಮೆದೆಯ ಬಳಿಗೆ ಬಂದನು. ಅಲ್ಲಿ ಬುಡದಲ್ಲಿ ಒಂದು ಸಿವಡು ಬಿದ್ದಿತ್ತು. ಅದು ಬಲು ಭಾರವಾಗಿತ್ತು. ಸರಿ ಕಾಳು ತುಂಬಿರುವ ದೊಡ್ಡ ತೆನೆಗಳುಳ್ಳ ಈ ಹೊರೆಯೇ ಲೇಸು. ಹೀಗೆಂದು ಹೊರಲಾರದೆ ಆ ಹೊರೆಯನ್ನು ಹೊತ್ತು ತಂದನು. ರಹೀಂ ಸಾಹೇಬನ ಮನೆಯ ಹಿತ್ತಲುಕಡೆಗೆ ಹೋದನು. ಬೇಲಿಯ ಉದ್ದಕ್ಕೂ

ನಡೆದನು. ಬಾಗಿಲು ಬಿಚ್ಚಿದನು. ಒಳಗೆ ಹೋದನು. ಮೊದೆ ಭರ್ತಿಯಾಗಿತ್ತು. ಆದರೆ ಒಂದು ಕಡೆ ಮಾತ್ರ ಒಂದೇ ಸಿವಡಿಗೆ ಜಾಗವಿತ್ತು. ತಾನು ತಂದ ಗೋದಿ ತೆನೆಯ ಸಿವುಡನ್ನು ಅಲ್ಲಿಗೆ ಇಟ್ಟು 'ಖುದಾ, ನಿನಗೆ ಪ್ರೀತಿಯಾಗಲಿ' ಎಂದು ಹಿಂದೆ ತಿರುಗಿದನು. ಆದರೆ ವಾಪಸು ಬರುವಾಗ್ಗೆ ಮುಳ್ಳು-ಬಾಗಿಲು ಎಳೆದು ಹಾಕುವಾಗ ಒಂದು ಮುಳ್ಳು ಕಾಲಿಗೆ ಚುಚ್ಚಿಕೊಂಡಿತು. ಅದೇನು ಮಾಡೀತು ಮುಕ್ಕ ಎಂದುಕೊಂಡು, ಹಿಂತಿರುಗಿ ಬಂದು ಮಲಗಿದನು.

ಹೀಗೇ ಇತ್ತ ರಹೀಮು, ಅತ್ತ ಕರೀಮು, ಒಬ್ಬರ ಮೆದೆಗೆ ಇನ್ನೊಬ್ಬರು ಗುಟ್ಟಾಗಿ ತೆನೆ ಹೊರೆಗಳನ್ನು ಹೊರುತ್ತಿದ್ದರು. ಇಬ್ಬರ ರಾಶಿಗಳೂ ಕುಂದಿ ಕಡಿಮೆಯಾಗಿರಲಿಲ್ಲ. ಇಬ್ಬರಿಗೂ ಆಶ್ಚರ್ಯ ಎರಡು ರಾಶಿಗಳೂ ಭರ್ತಿ ಯಾಗಿದ್ದುದು ಹೇಗೆ?

ಕೊಟ್ಟದ್ದು ತನಗೆ

ಕೊಟ್ಟದ್ದು ತನಗೆ

**ಕೊಟ್ಟದ್ದು ತನಗೆ**

ಎಂಬ ನುಡಿಯು ಬರಬರುತ್ತ ದೊಡ್ಡದೊಡ್ಡದಾಗಿ ಕಿವಿಗೆ ಕೇಳುತ್ತಲೇ ಇತ್ತು, ಇಬ್ಬರ ಕಿವಿಗೂ. ಹಾಗಾದರೆ ಕೊಟ್ಟು ಮುಗಿಸುವುದು ಇನ್ನು ಹೇಗೆ? ತಮ್ಮ ತಮ್ಮ ಮನಸ್ಸಿನ ಇಷ್ಟಗಳನ್ನು ಸಲ್ಲಿಸಿಕೊಳ್ಳುವುದಕ್ಕ ಇಬ್ಬರಿಗೂ ಬಲು ಕಷ್ಟವಾಗಿತ್ತು.

ಆರು ದಿನಗಳ ನಂತರ ರಹೀಮನು, ಕರೀಮನ ಮನೆಯ ಕಡೆಗೆ ಹೋಗು ತ್ತಿದ್ದನು. ರಹೀಮನು ತೆನೆ ಬಡಿಸಿಕೊಳ್ಳಲು, ಕಣಜ ಕಟ್ಟಿಸಿಕೊಳ್ಳಲು ಒಳ್ಳೆಯ ದಿನ ನೋಡಿಸಿ, ಕೂಲಿಯಾಳುಗಳನ್ನು ಬರಹೇಳಬೇಕಾಗಿತ್ತು. ಕರೀಂಸಾಹೇಬನು ಜಗುಲಿಯ ಮೇಲೆ ಕುಳಿತಿದ್ದನು. ರಹೀಮನು ಬಂದು ಸಲಾಂ ಮಾಡಿ ಕುಳಿತನು. ಹಾಗೇ ಕಾಲು ಬಳಿ ಕುಳಿತವನು ನೋಡಿದನು. ಅಣ್ಣನ ಬಲಗಾಲು ಊದಿತ್ತು.

ರಹೀಂ:—ಅಣ್ಣ ಇದೇನು ಕಾಲು ಊದಿದೆ?

ಕರೀಂ:—ಏನೋ ಎಂತೋ, ಊದಿದೆ, ಕೀತಿದೆ, ಬಲು ನೋವು.

ರಹೀಂ:—ಎಲ್ಲಿ, ಕಾಲು ನೀಡು ತೆಗೆಯುತ್ತೇನೆ ಮುಳ್ಳಿದ್ದಿರಬಹುದು

ಹಾಂ! ಕಾಲು ಎಳೆದರೆ ಹೇಗೆ? ನೋಯಿಸದ ಹಾಗೆ, ಉಫ್ಫೆಂದು ಊದುತ್ತ ತೆಗೆದುಬಿಡುತ್ತೇನೆ.

ಕರೀಂ:—ನೋಯಿಸಬೇಡ, ಹಾಳು ಮುಳ್ಳು ಚುಚ್ಚಿಬಿಟ್ಟಿದೆ! ತೆಗೆದೆಯಾ, ಐದಾರು ದಿನದಿಂದ ಕಷ್ಟಕೊಡುತ್ತಿದೆ, ಆ ಮುಳ್ಳು.

ರಹೀಂ:—ಎಷ್ಟು ಕೀವು ನೋಡಿದಿಯಾ ಕರೀ ಮುಳ್ಳು! ಇದು ಎಲ್ಲಿ ಇತ್ತಣ್ಣಾ ಈ ಮುಳ್ಳು? ಇನ್ನೆರಡು ದಿನ ಎಲ್ಲಿಯೂ ಓಡಿಯಾಡಬೇಡ. ಹುಡುಗರ ಕೈಲಿ ಒತ್ತಿ ಕಳಿಸುತ್ತೇನೆ. ನಾಳೆ ಬಿಟ್ಟು ನಾಡಿದ್ದು ಸಂಜೆಗೆ ತೆನೆ ಬಡಿಸಿಬಿಡುತ್ತೇನೆ

ಎಂದು ಹೇಳಿ ಹೊರಟು ಬಂದನು ರಹೀಮುಸಾಹೇಬ. ಆದರೆ ಆ ಮುಳ್ಳು ಎಲ್ಲಿತ್ತೆಂದು ರಹೀಮುನಿಗೆ ಆಶ್ಚರ್ಯ. ಅದು ತನ್ನ ಹೊಲ ಅಥವ ಹಿತ್ತಲಲ್ಲಿ ಇರಬೇಕಾದ ಮುಳ್ಳು. ಕರೀಮುನ ಕಾಲಿಗೆ ಚುಚ್ಚಿದ ಮುಳ್ಳು ಎಲ್ಲಿಯದು ಎಂದು ರಹೀಮುನು ಯೋಚಿಸುತ್ತ ಮನೆಗೆ ಬಂದನು.

ಅತ್ತ ಕರೀಮುನು ಯೋಚಿಸುತ್ತ ಕುಳಿತನು. ಗೊತ್ತಾಗಿಹೋಯಿತೇ ಹಾಗಾದರೆ ರಹೀಮುನಿಗೆ! ಹೇಗೆ ತಾನೆ ತೆನೆ ಸಿವಡುಗಳನ್ನು ಸಾಗಿಸುವುದು! ನಾಳೆ ಬಿಟ್ಟು ನಾಡಿದ್ದು ತೆನೆ ಬಡಿದು ಬಿಡುವನಲ್ಲ! ಏನು ಗತಿ? ಹೀಗೆಂದುಕೊಳ್ಳುತ್ತ ಇದ್ದನು.

ಎಂಟನೆಯ ದಿನ ಬೆಳಗು ಮುನ್ನ ಕರೀಮುನು ಎರಡು ಹೊರೆಗಳನ್ನು ಹೊತ್ತು ತಂದನು. ದಾರಿಯಲ್ಲಿ ಕಾಲಿಗೆ ಕಟ್ಟಿದ ಒಟ್ಟೆ ಸಡಲಿ ಬಿತ್ತು. ಗೋದಿಯ ತೆನೆಯ ಸಿವಡುಗಳನ್ನು ಅಲ್ಲೇ ಹಾಕಿ ಒಟ್ಟೆ ಕಟ್ಟಿಕೊಳ್ಳುತ್ತ ಇದ್ದನು 'ಅಯ್ಯೋ ಬೆಳಗಾಗುತ್ತ ಬಂದಿತಲ್ಲ' ಎಂದು ಆ ಎರಡು ಸಿವಡುಗಳನ್ನೂ ಹೊತ್ತುಕೊಂಡು ಒಂದು ಹೆಜ್ಜೆ ಮುಂದೆ ಇಟ್ಟನು.

ಇಷ್ಟರಲ್ಲೇ ಇನ್ನಾರೊ ಒಬ್ಬರು ಇನ್ನೆರಡು ಸಿವಡು ತೆನೆಗಳನ್ನು ಹೊತ್ತುಕೊಂಡು ಅತ್ತಕಡೆಯಿಂದ ಬಂದರು. ಅದಾರು? ತಮ್ಮನಾದ ರಹೀಮುಸಾಹೇಬ. ಕಡೆಯ ದಿನ ಅಣ್ಣನ ಮೆದೆಗೆ ಎರಡಾದರೂ ತೆನೆ ಸಿವುಡುಗಳನ್ನು ಸೇರಿಸಿ ಬಂದು ಅನಂತರ ಕಾಳು ಬಡಿದುಕೊಂಡರಾಯಿತೆಂದು ಬರುತ್ತಲಿದ್ದಾನೆ.

ಕರೀಮುಸಾಹೇಬ:—ಯಾರಪ್ಪ ಅದು? ರಹೀಂಸಾಹೇಬನ ಹಿತ್ತಲ

ಬಾಗಿಲಿಂದ ಬಂದಹಾಗಿದೆ. ಏನಪ್ಪ ಕಳ್ಳತನ ಅದು? ಮಕ್ಕಳು ಮರಿ ಉಳ್ಳಾತನ ಕಾಳು ಕದಿಯಬಾರದಪ್ಪ. ಅದನ್ನು ಅಲ್ಲಿ ಹಾಕಿ ಬಾ, ಬೇಕಾದರೆ ನನ್ನ ಸಿವುಡು ಇವೆರಡನ್ನೂ ತೆಗೆದುಕೋ, ನಾಳೆ ಬಾ ಇನ್ನೆರಡು ಕೊಡುತ್ತೇನೆ.

ರಹೀಮುಸಾಹೇಬ:—ಅಣ್ಣಾ! ಕರೀಮುಸಾಹೇಬ! ನಾನೇ ಬಂದೆ ರಹೀಮು.

ಕರೀಮು:—ಎಲ್ಲಿಗೆ ಒಯ್ಯುತ್ತಿ ಈ ಗೋದಿಯೆಲ್ಲ?

ರಹೀಮು:—ದೇವರು..ಖುದಾ ಖಾವಿಂದ ಇರುವಲ್ಲಿಗೆ. ನೀನೇಕೆ ಬಂದೆ ಇಲ್ಲಿಗೆ? ಕಾಲು ನೋವಾಗಿದೆ. ಇಂಥಾ ನೋವಿನಲ್ಲಿ ಎಲ್ಲಿಗೆ ಹೊರಟೆ ನೀನು? ಅಣ್ಣಾ, ಸುಳ್ಳು ಹೇಳಬೇಡ. ಹೇಳು! ಹೇಳು!

ಕರೀಮು:—ಎಲ್ಲಿಗೋ ಹೊರುತ್ತಲಿದ್ದೆ. ಈ ಹಾಳು ಕಾಲು ಈ ದಿನ ಬಹುವಾಗಿ ಬಾಧೆ ಕೊಟ್ಟಿತು.

ಈ ವೇಳೆಗೆ ಜಹಾಪನಾ ಬಾದಶಹರು ಅಲ್ಲಿಗೆ ದಯಮಾಡಿಸಿದರು. ಒಬ್ಬರು ಇಬ್ಬರು ನಾಲ್ವರು ಹೀಗೆ ನೂರಾರು ಜನ ಕೂಡಿದರು. ಬಾದಶಹರು ಗೋದಿ ಹೊರೆಗಳ ಕತೆಯೆಲ್ಲ ಕೇಳಿದರು. ಬಹಳವಾಗಿ ಸಂತೋಷಪಟ್ಟರು.

ನಾಲ್ಕೂ ತೆನೆ ಹೊರೆಗಳನ್ನು ಆಗಲೇ ಅಲ್ಲೇ ಬಡಿಸಿದರು. ಒಕ್ಕಿದರು ತೂರಿದರು, ಒಡೆದರು, ಹುಗ್ಗಿ ಮಾಡಿಸಿ ಫಕೀರರಿಗೆ ಉಣಿಸಿದರು.

ಇಬ್ಬರು ಒಡಹುಟ್ಟಿದವರು ಒಲುಮೆಯನ್ನು ತೋರಿಸಿದ ಆ ಮಹಾ ಪವಿತ್ರ ಜಾಗದಲ್ಲಿ ಶಂಕುಸ್ಥಾಪನೆ ಮಾಡಿದರು. ಒಂದು ವರ್ಷದಲ್ಲೇ ಮಸೀದೆಯನ್ನು ಕಟ್ಟಿಸಿದರು. ಕರೀಮನು ತನ್ನ ಆಸ್ತಿಯನ್ನೆಲ್ಲ ಬಡ ಫಕೀರರಿಗೆ ದಾನ ಮಾಡಿದನು. ರಹೀಮನ ಕನಸು ನಿಶ್ಚಯವಾಯಿತು. ಮಸೀದಿಯ ಬಾಗಿಲು ಸದಾ ತೆಗೆದಿರುತ್ತದೆ. ಮೌಸಿನನು ಹೊತ್ತು ಹೊತ್ತಿಗೂ ಕೂಗುವನು—ಹೈಯ್ಯಾಲಸ್ಸಲಾತ್! ಹೈಯ್ಯಾಲಸ್‌ಲಾತ್! 'ಇತ್ತಕಡೆಯವರು ಬನ್ನಿ! ಅತ್ತಕಡೆಯವರು ಬನ್ನಿ!'—ಎಂದು ಕೂಗುತ್ತ ಇದ್ದ ರಹೀಂ ದಂಪತಿಗಳಿಗೆ ಇನ್ನೆಷ್ಟು ಸಂತೋಷವೋ! ರಹೀಮನ ಕನಸು ಅದ್ಭುತ ರೂಪವನ್ನು ಕಂಡಿತ್ತು.

———

## ಶಂಕರ ಸ್ಕೌಟು

ನಿನ್ನೆಯ ದಿನ ರಾತ್ರಿ ಎಂಟರ ಸಮಯಕ್ಕೆ ನಾವೆಲ್ಲರೂ ಊಟಕ್ಕೆ ಕುಳಿತಿದ್ದೆವು. ಶಂಕರು ಸ್ಕೌಟು ಆಟಕ್ಕೆ ಹೋಗಿದ್ದವನು ಬಂದನು. ನಾವೆಲ್ಲರೂ ತೊವ್ವೆ ಪಾಯಸ ಎಂದು ಮಾತನಾಡಿಕೊಳ್ಳುತ್ತಲಿದ್ದೆವು. ಆ ಮಾತೆಲ್ಲ ಕೇಳಿ ಶಂಕರನ ಕಣ್ಣೆಲ್ಲ ನಮ್ಮ ಮೇಲೆಯೇ ಇತ್ತು. ಆದರೂ ನಿಧಾನಿಸಿ, ಬಟ್ಟೆಯೆಲ್ಲ ತೆಗೆದು ಟವೆಲ್ಲನ್ನು ಕೈಯಲ್ಲಿ ಹಿಡಿದು 'ಕಾಲಿಗೆ ನೀರು' ಎಂತ ಕೂಗಿದನು. ಗೌರಿಯು ನೀರು ಕೊಟ್ಟಳು. ಹೊರಗೆ ಕತ್ತಲಾಗಿದ್ದಿತು. ನಮ್ಮ ಪುಟ್ಟ ಸುಬ್ಬು 'ದೀಪ ಬೇಡವೇನೋ ? ಕತ್ತಲೆಯಲ್ಲವೆ.' ಎಂದನು. 'ಏನೂ ಬೇಡ. ನಾನು ಈ ಹೊತ್ತು ಕತ್ತಲೆಯಲ್ಲೇ ಬಂದಿದ್ದೇನೆ' ಎಂದು ಶಂಕರನು ಕಾಲು ತೊಳೆದು ಬಂದು, ದೇವರ ಕೋಣೆಗೆ ಹೋಗಿ ಅವನಿಗೆ ಹೇಳಿಕೊಟ್ಟಿದ್ದ ಸ್ತೋತ್ರವನ್ನು ಹೇಳಿ ನಮಸ್ಕಾರ ಮಾಡಿ ಊಟದ ಮನೆಗೆ ಬಂದು ತನ್ನ ಮಣೆಯ ಮೇಲೆ ಕುಳಿತನು. ನಮಗೆಲ್ಲ ಊಟವು ಮುಗಿಯುತಲಿತ್ತು. ಆದರೂ ನಾನು ಕಣ್ಣು-ಸನ್ನೆ ಮಾಡಿ ಎಲ್ಲರನ್ನೂ ಸುಮ್ಮನೆ ಕೂಡಿಸಿದ್ದೆನು.

' ನೀವೆಲ್ಲ ಏಳಬಹುದು ' ಶಂಕರನೆಂದನು. ಕಮಲಿಯು ಬಂದ ನಗುವನ್ನು ಕೈವತ್ತಿ ಹಿಡಿದು ನಿಲ್ಲಿಸಿದಳು. ನಾನು ಅವರನ್ನೆಲ್ಲ ದುರುದುರನೆ ನೋಡಿದೆನು. ಎಲ್ಲರೂ ಸುಮ್ಮನಾದರು.

ಪಾಯಸವು ಬಲು ರುಚಿಯಾಗಿತ್ತು. ಶಂಕರೂಗೆ ಬುಡದ ಪಾಯಸವಾದ್ದರಿಂದ ಬಾದಾಮಿ ದ್ರಾಕ್ಷಿಗಳು ಹೆಚ್ಚಾಗಿ ಬಿದ್ದವು ಅವನು ಗೌರಿಯ ಮುಖವನ್ನು ನೋಡಿ ' ಇದೇನು ಇಷ್ಟೊಂದು ಹಾಕಿವೆ! ನಿನಗಿನ್ನೂ ಊಟವಾಗಿಲ್ಲವಲ್ಲ ' ಎಂದನು. ಗೌರಿಗೂ ತನಗೂ ಕಣ್ಣಲ್ಲಿ ನೀರು ತುಂಬಿ ಬಂದಿತು.

ಕಮಲಿಯು ಗಟ್ಟಿಯಾಗಿ ನಕ್ಕಳು.

ಪುಟ್ಟ ಸುಬ್ಬನು ' ಯಾಕೆ ಕಾಮಿ ನಕ್ಕೋದು ಗೌರಾಂಗೆ ಬೇಡವೇನೆ ಪಾಚ್ಯ ' ಎಂದು ಅಬ್ಬರಿಸಿದನು. ಕಮಲಿಯು ನಕ್ಕದ್ದನ್ನು ನೋಡಿ ಶಂಕರನಿಗೆ ಸ್ವಲ್ಪ ನಾಚಿಕೆಯಾಯಿತು ಆದರೆ ನಾನು ಮತ್ತು ಗೌರಿ ಏನೂ ಮಾತನಾಡದೆ ಇದ್ದೆವು.

ಊಟ ಮುಗಿಯಿತು.

ಕಮಲಿಯನ್ನು ಕರೆದು, ಶಂಕರನಿಗೆ ಹಾಸಿಗೆ ಹಾಸಿಕೊಟ್ಟು, ಸುಬ್ಬನನ್ನು ಮಲಗಿಸಿ ಬಂದು ನನಗೆ ಹೇಳಿ ಹೋಗಿ ನೀನು ಮಲಗಬೇಕಂದು ತಾಕೀದು ಮಾಡಿದೆನು.

ಕಮಲಿ ಬಂದಳು. ಗೌರಿಗೆ ಒಳಗಿನ ಕೆಲಸ ಮುಗಿದಿತ್ತು. ಆಕೆಯೂ ಬಂದಳು. ' ಕಮಲಾ ನೀನೀ ದಿನ ಊಟಕ್ಕೆ ಕುಳಿತಾಗ್ಗೆ, ಎರಡು ಮೂರು ಬಾರಿ ನಗುವುದರಲ್ಲಿದ್ದೆ, ನಾನು ಕಣ್ಣುಸನ್ನೆ ಮಾಡಿ ಬೇಡವೆಂದು ಅಡಗಿಸಿದ್ದರೂ ಸಹ, ಕಡೆಗೆ ಗಟ್ಟಿಯಾಗಿ ನಕ್ಕೇಬಿಟ್ಟೆಯಲ್ಲೆ ' ಎಂದನು. ಅದಕ್ಕೆ ಕಮಲೆಯು ' ಏನೋಪ್ಪ ಈ ದಿನದಿಂದ ಶಂಕರು ಏನೋ ಒಂದು ಬಗೆಯಾಗಿದ್ದಾನೆ. ಯಾರೋ ವಯಸ್ಸಾದವರು ಮಾತಾಡುವ ಹಾಗೆ ಆಡುತ್ತಾನೆ. ' ಎಂದಳು.

' ಸದ್ಗುಣವು ದೊಡ್ಡವರಿಗೇ ಸರಿಯೇನು. ಪುಟ್ಟ ಹುಡುಗಾಟಿಕೆಯಿಂದ ಒಳ್ಳೆಯ ಗುಣಗಳನ್ನು ಕಲಿಯಬಾರದೇನು? ಹುಡುಗರು ಒಳ್ಳೆಯವರಾಗುವದಕ್ಕೆ ಪ್ರಯತ್ನಪಟ್ಟಾಗ್ಗೆ, ಕಮಲಿಯಂತೆ ನಕ್ಕು ಅವರನ್ನು

ಹಿಂದಕ್ಕೆ ತಳ್ಳುವವರು ಬಲು ಮಂದಿ ಹಾಗೇ ಆಲೋಚಿಸಮೆಲೇ ಮಕ್ಕಳ ಮನಸ್ಸನ್ನು ಕಡಿಸುವವರು ಅನೇಕರಿರುವರಲ್ಲವೆ. ಈ ದಿನ ಬೆಳಗ್ಗೆ ನಾನು ಮುಂಜೆ ಎದ್ದು ಶಂಕರನನ್ನ ಎಬ್ಬಿಸಿ, ಅವನು ಈ ದಿನ ಮಾಡಬೇಕಾದ ಕೆಲಸಗಳನ್ನು ಬರೆಸಿಟ್ಟು—ಅದನ್ನೆಲ್ಲ ಒಂದೊಂದಾಗಿ ಮಾಡುವ ಹಾಗೆ ಹೇಳಿಕೊಟ್ಟಿದ್ದೆನು. ನನಗೂ ಗೌರಿಗೂ ಮಾತು ಕೊಟ್ಟು ಅವನು ಈ ದಿನ ಬೆಳಗಿನಿಂದ ಸರಿಯಾಗಿ ಬಂಗಾರದ ಹುಡುಗನಂತೆ ಆಡಿಕೊಂಡು ಬಂದಿರುವನು. ಈ ದಿನ ಕತ್ತಲೆಯಾದರೂ ಸಹ ಒಬ್ಬನೇ ಮನೆಗೆ ಬಂದಿರುವನು. ದಣಿದಿದ್ದರೂ ಕೂಡ ಕಾಲು ತೊಳೆದುಕೊಂಡು ದೇವರ ಪ್ರಾರ್ಥನೆ ಮಾಡಿ ಊಟಕ್ಕೆ ಬಂದಿರುವನು. ನೀವೆಲ್ಲ ಕಾಯುತ್ತ ಕುಳಿತುಕೊಳ್ಳಬೇಡಿರೆಂದು ನಮಗೆಲ್ಲ ಹೇಳಿರುವನು. ಕಡೆಗೆ ಅಮ್ಮನಿಗೆ ಇಲ್ಲದ ಹಾಗೆ ಪಾಯಸವೆಲ್ಲ ತನ್ನ ಎಲೆಗೆ ಬಿತ್ತಲ್ಲ ಎಂದು ಸಂಕಟ ಪಟ್ಟಿದ್ದಾನೆ. ನೋಡು ಈ ದಿನದಿಂದ ಶಂಕರು ಸದ್ಗುಣಗಳನ್ನು ಕಲಿಯುತ್ತ ಬಂದರೆ ವಯಸ್ಸಾದ ಮೇಲೆ ಅವನು ಎಂಥ ಗೌರವ ಸಂಪಾದನೆ ಮಾಡಿಯಾನು '—ಎಂದು ಹೇಳಿ ' ಶಂಕರನಿಗೆ ನಿದ್ರೆ ಬಾರದಿದ್ದರೆ ನಾವೀಗ ಆಡಿದುದೆಲ್ಲ ಕೇಡಿಗಾದೀತು—ನೋಡಿ ಬಾ ಹೋಗು '-ಎಂದ ಮೇಲೆ ಕಮಲಿಯು ನೋಡಿ ಬಂದಳು.

ಎಡದ ಮೊಳಕೈ ಮೇಲೆ ತಲೆ ಇಟ್ಟುಕೊಂಡು, ನಗು-ಮೊಗ ಮಾಡಿ ಕೊಂಡು ಸುಖವಾಗಿ ಮಲಗಿಕೊಂಡಿದಾನೆ ' ಎನ್ನುತ್ತಲೆ ' ನೋಡಿದೆಯ ಆದೇ ಮತ್ತೆ ನೀರಿನ ಮೇಲೆ ತಾವರೇ ಹೂವು ತೇಲುವ ಹಾಗೆ, ಪುಟ್ಟ ಹುಡುಗರ ಮನಸ್ಸು ನಿದ್ರೆಯಲ್ಲಿ ತೇಲಿಹೋಗುವುದು—ಎಂತ ಹೇಳುವ ಬಗೆ ನೀನೀ ದಿನ ನಗದಿದ್ದರೆ, ಅವನನ್ನು ಕರೆದು, ಈ ದಿನ ಏನೇನು ಮಾಡಿದ, ಏನೇನು ಬಿಟ್ಟನೆಂದು ಕೇಳಿ—ಇನ್ನೂ ಹೇಳಬೇಕಾದ್ದನ್ನೆಲ್ಲ ಒಂದು ಪುಟ್ಟ ಕಥೆಯಲ್ಲಿ ಸೇರಿಸಿ ಹೇಳಿ ಅವನನ್ನ ಮಲಗಿಸುತಲಿದ್ದೆ ' ಎಂದೆನು

ಕಮಲೆ ' ಪಾಪ ಮಗು ಏನೆಂದುಕೊಂಡಿತೋ ಕಾಣೆ, ಅಪ್ಪ, ನನಗೆ ಇನ್ನೂ ಮಗೂ ಒರಟು ಬುದ್ಧಿ !—ಶಂಕರು ಬೆಳೆದ ಮೇಲೆ ತೊಳೆ ಮುತ್ತಾಗಲಿ. ನಮ್ಮ ಮನೆಯ ನಂದಾದೀಪವಾಗಲಿ ! '



# ಹರಕೆ     

ಶಿವರಾಮು ಕರಣಿಕರು ಶಿದ್ಧರಾಜಪುರದ ಯಾತ್ರೆಗೆ ಹೊರಡುವರೆಂದು ಎಲ್ಲೆಲ್ಲೂ ವರ್ತಮಾನ. ತ್ರಯೋದಶಿಯ ಬೆಳಗ್ಗೆ ಸ್ವಾಮಿ ಮೂಡುವ ಮುಂದೆಯೇ ಗಾಡಿಗಳು ಬಂದು ಮನೆಯ ಮುಂದೆ ನಿಂತವು. ಅಕ್ಕ, ಅಕ್ಕನ ಮಕ್ಕಳು, ಮನೆ ತಪ್ಪಿದ ತಂಗಿ, ಅವಳ ಪೋರೆಗಿತ್ತಿ, ರಾಮಪುರದ ಹನುಮಪ್ಪಯ್ಯನ ಸೊಸೆ—ಖಾಸಾ ಚಿಕ್ಕಪ್ಪನ ಮಗಳಲ್ಲವೆ ಆಕೆ—ಅಂತು ಇಂತು ಒಂದಿಪ್ಪತ್ತು ಮಂದಿ ಕೂಡಿದರು. ಆ ದಿನ ಗಂಜಿ ಊಟ, ಅರಳ ಹಿಟ್ಟಿನ ಪಾನಕ, ಹೆಸರು ತಿರುವಿದ ಕಡೆಗು, ಅಕ್ಕಚ್ಚು. ಹೀಗೆಲ್ಲ ಬೇಕೆಂಬುದನ್ನು ಮಾಡಿಕೊಟ್ಟು—ಕೇಸುವಿನ ಗೆಡ್ಡೆ ಹುಳಿ, ಬಾಳೆದಿಂಡಿನ ಪಲ್ಲೆಗಳನ್ನು ಮಾಡಿ ಎಲ್ಲರಿಗೂ ಬಡಿಸಿ, ಉಸ್ಸೆಪ್ಪ ಎಂದು ಕೂರುವ ಹೊತ್ತಿಗೆ ಸೀತಕ್ಕಯ್ಯನಿಗೆ ನಡು ಬಿದ್ದುಹೋಗಿತ್ತು. ಆದರೆ ಇಷ್ಟೊಂದು ಜನ ಬೇಕೆಂದರೆ ಬಂದಾರೇನು ? ಏನೋ ಯಾತ್ರೆಯ ನೆಪ. ಮುಖ್ಯ ಮನೆ ದೇವರಿಗೆ ತೃಪ್ತಿಯಾದರೆ ಸಾಕು.

ಕರಣಿಕರು ಚಿಬ್ಬಲುಗುಡ್ಡೆಯ ಒಳಿ ಹೊಳೆ ದಾಟಿಸುವ ಅಂಬಿಗನಿಗೆ

ಹೇಳಿಕಳುಹಿಸಿದರು. ಹೊಲೆಯರ ದೊಡ್ಡನ ಕಡೆಯಿಂದ ಆವನಿಗೆ ಏಳೆಂಟು ಚರ್ಮಗಳನ್ನು ಕೊಡಿಸಿ ಭಾರಿಯದೊಂದು ಉಕ್ಕಡವನ್ನು ಮಾಡಿಸಿಡುವ ಹಾಗೆ ಹೇಳಿದರು. ತದಿಗೆಯ ದಿನವೇ ಹೊರಡಬೇಕಾಯ್ತು. ಎಲ್ಲರಿಗೂ ಊಟವಾಗಿ ಸೀತಕ್ಕಯ್ಯನು ಊಟಕ್ಕೆ ಕುಳಿತಿದ್ದಾಳೆ ಆಗ್ಗೆ ಚಿಬ್ಬಲುಗುಡ್ಡೆ ಯಿಂದ ಜಾನತ್ತೆಯು ಬಂದೇಬಂದು ಗಟ್ಟಿಯಾಗಿ ಅಳಲಾರಂಭಿಸಿದಳು. ' ಈ ಬಡ ಮುಕ್ಕನ್ನ ಕೇಳೋರು ತಾನೆ ಯಾರು ? ನೀನೇಂಬೋದಿಲ್ಲ. ಈ ಕೆಟ್ಟ ಕುರುಡೆಯೊಂದು ಎಲ್ಲೆಲ್ಲಿಗೂ ಬೆನ್ನಹತ್ತಿ ಬರಬೇಕು. ಬಿಟ್ಟು ತಾನೆ ಎಂಗೆ ಹೋಗಲಿ. ಸೀತೆ ನೀನೂ ಸುದಾ..' ಎಂದು ಕೇಳಿದಷ್ಟೂ ಮಾತಾಡಿಸಿದಷ್ಟೂ ಹೆಚ್ಚು ಹೆಚ್ಚಾಗಿ ಅತ್ತು ಗೋಳಾಡಿದಳು. ' ಅಷ್ಟೊಂದು ಜನ ಬರುವಾಗ್ಗೆ ಜಾನತ್ತೆಯೊಬ್ಬಳೇನು ಹೊರೆಯೆ ! ಅಲ್ಲೆ ಚಿಬ್ಬಲುಗುಡ್ಡೆಯಲ್ಲೇ ಸೇರಿ ಕೊಂಡಿದ್ದರಾಗದಿತ್ತೆ ನಮ್ಮವ್ವ. ಇಷ್ಟು ದೂರ ಬಂದೆಯಾ ಇದಕ್ಕೆ ' ಎಂದು ಸೀತವ್ವನು ಅವಳಿಗೆ ಕಾಲು ತೊಳೆಯಿಸಿ ಹುಣಸೇ ಗೊಜ್ಜು ಕಿವಿಚಿ, ಅರಳ ಹಿಟ್ಟು ಕದರಿ ಕೊಟ್ಟಳು.

ಮೂರೂ ಸಂಜೆಯ ಹೊತ್ತಿಗೆ ಗಾಡಿಗಳನ್ನೆಲ್ಲ ಕಟ್ಟಿದರು. ಕಾಡು ಹತ್ತಿದ ಕೂಡಲೇ ಹಾದಿಯು ಎಲ್ಲೆಲ್ಲೋ ಹತ್ತಿ ಇಳಿದು ಅಡ್ಡಾದಿಡ್ಡಿ ಯಾಗಿ ಹೋಯಿತು. ಯಾತ್ರಿಕರ ಮೂಳೆಗಳೆಲ್ಲ ನಜ್ಜುಗುಜ್ಜಾದವು ಈ ಕಡೆ ಬಿರ ಆ ಕಡೆ ಬಿರಿ, ಮುಂಭಾರ ಹಿಂಭಾರ, ಈ ಎತ್ತಿನ ಕೊರಳು ಜಿಗಿ ಯಿತು ಆ ಎತ್ತು ಕೊರಕಲಿಗೆ ಬಿತ್ತು—ಹೀಗೆಲ್ಲ ಭಂಡಾಟ ಪಟ್ಟು ಕಂಡೇವೇ ಕಂಡೇವೇ ಎಂದು ಚಿಬ್ಬಲುಗುಡ್ಡೆಯನ್ನು ಕಂಡರು

ಅಂಬಿಗರ ದೇವೋಜಿಯು ದೊಂದಿಗಳನ್ನೆಲ್ಲ ಹಚ್ಚಿ ದೊಡ್ಡ ದೊಡ್ಡವರ ಕೈಲಿಟ್ಟನು ತದಿಗೆಯ ಚಂದ್ರನು ನಡು ನೆತ್ತಿಯ ಮೇಲೆ ಜಗಿಜಗಿಸುತ್ತಿ ದ್ದನು. ತುಂಗೆಗೆ ನಿದ್ರೆಯೋ ಏನೋ ಬಲು ಗಂಭೀರವಾಗಿದ್ದಳು. ಆಚೆಯ ದಡದಲ್ಲಿ ಕೆಲವರು ಕೂಗಾಡುತಲಿದ್ದರು ಇಲ್ಲೆಲ್ಲೋ ಕಲವು ಬಿದುರುಗಳು ಸಿಳ್ಳೆ ಹಾಕುತಲಿದ್ದುವು. ಉಕ್ಕಡವು ಬಂದಿತು ದೇವೋಜಿಯು ಉಕ್ಕಡಕ್ಕೆ ಹಣೆ ಮುಟ್ಟಿಸಿ ರಾಮರಕ್ಷೆಯೆಂದು ಅಂಚನ್ನು ಬಗ್ಗಿಸಿ ಹಿಡಿದನು. ಎಲ್ಲರೂ ಹತ್ತಿದರು. ಜಾನತ್ತೆಯು ಬರುವದು ತಡವಾಯಿತು. ಅವಳೂ ಹತ್ತಿದಳು.

ಶಿವರಾಮು ಕರಣಿಕರು—'ದೇವ್ರೋಜೀ ! ಸೀಸೇಸೊ ಗಂಗೆಯು ಮಗ. ನಮಗೆಲ್ಲ ಗತಿ ಹೇಗಯ್ಯ, ಎತ್ತಲಿಂದ ಒಂತೋ ಚಿತ್ರೀ ಮಳೆ ಎಂತ ಮೊದಲೇ ಅನ್ನುತ್ತಾರೆ—ಪಾರು ಮಾಡಿಸ್ತೀಯ ?' ಎಂದರು. ಅಂಬಿಗನು 'ಅಯ್ಯೋ ಬಿಡಿ ಸಸ್ದಣಿ! ತುಂಗವ್ವನ ಮಡಲಾಗೇನು ಬಯ ಸಿವೇ ನ್ಯಾರು ಬಯೆಕೆ-ಗಿಯ್ಕೆ ಮಾಡ್ಕೊಳ್ಳಿ. ನಿಮ್ಮನೆ ಕೌಲಿ ಇದ್ದಾಂಗಲ್ಲ ಇದು-ಗಸ್ನೆ ಹೊಡಿಯೊಲ್ಲ, ತಿರಗಣೆ ಮೊದಲಿಗೇ ಇಲ್ಲ—ಬಲು ಸಾದು ಹಸ ಇದ್ದಾಗೆ! ಎಲ್ಲ ಕುಂತರೊ—ಯಾರೂ ವಾಲಾಡಬ್ಯಾಡ್ರಿ—'ತುಂಗೆ ನಮ್ಮವ್ವಾ ನಿಸ್ನ ಮಡಲಾಗಿದ್ದೀವಿ—ಎಲ್ಲಾ ರಾಮನ್ನಿ' ಎಂತ ಹೇಳ ಹೇಳುತ್ತ ಹುಟ್ಟು ಹಾಕಿ ಗಣೇ ಆಡಿಸಿ-ನಡುಹೊಳೆಗೆ ತಂದು ತುಸು ಹೊತ್ತು ಕೆಳನೀರಿಗೆ ಬಿಟ್ಟನು ಇಷ್ಟು ಹೊತ್ತೂ ಮಲಗಿದ್ದ ಜಾನತ್ತೆಯ ಮಗನು 'ಜಾನಿ ಏನೇ ಇದು—ಅಕ್ಕುಡ್ಡೇನೆ—ಅತ್ತೆಲ್ಲೇ ಬಾಯಾರುತ್ತೆಲ್ಲೇ ಎಂದನು. ಜಾನಿಯು ಮುಂಗೋಪಿ. 'ಬಿದ್ದುಕೋ ರಂಡೇಕುರಡೆ! ಇಲ್ಲೇ ಎಲೀ ಹಾಕಿಬಿಟ್ಟೇನು! ನೀರಂತೆ ನೀರು! ತುಸ ಪ್ರಾಣ ಬಿಗಿ ಹಿಡಿ! ದಡ ಹತ್ತಿದ ಮೇಲೆ ನೀರಾಗೇ ಮುಳುಕೊಳ್ಳುವಿಯಂತೆ.' 'ಇದ್ಯಾಕೆ ಜಾನತ್ತೆ' 'ಎನ್ರೀ ಜಾನಮ್ಮ' 'ಒಳ್ಳೇ ಚಂದಾಯ್ತು ಜಾನೀ' ಎಂತ ಹೆಂಗಸರೆಲ್ಲ ಛೀಮಾರೀ ಮಾಡಿದ ಮೇಲೆ, ಅಂಬಿಗರ ದೇವ್ರೋಜಿಯು—'ಬಿಡಿ ನನ್ನವ್ವ ನಡು ಸೀರಾಗೆ ಹಾಂಗಂತಾರೇನವ್ವ—ಈ ಕೇಡಿ ಉಕ್ಕಡಕ್ಕೆ ಇನ್ನೂ ಮರಿ ಕೊಟ್ಟಿಲ್ಲ—ಕೆಟ್ಟ ಕಾಲ ಕೆಟ್ಟ ದಿನ- ಒಳ್ಳಿತ್ತು ಎನ್ನು ಸನ್ನವ್ವ' ಎಂತ ಹಾಗು ಹೀಗು ಬೇಗ ಬೇಗ ಹುಟ್ಟಾಡಿಸಿ ದಡ ಹತ್ತಿಸಿದನು.

ವಿಜೃಂಭಣೆಯಿಂದ ಸತ್ಯೇಶ್ವರನ ರಥೋತ್ಸವ ನಡೆಯಿತು ಮಂಡಕ್ಕಿ ಉಂಡೆ, ಸಕ್ಕರೆಕಡ್ಡಿ, ದೇವಿಪ್ರಸಾದ, ಹುಡುಗರಿಗೆ ಆಟದ ಸಾಮಾನ ಮೊದಲಾಗಿ ಎಲ್ಲವನ್ನೂ ತಿಂದಿದ್ದರು. ಜಾನತ್ತೆಯು ತನ್ನ ಹುಡುಗನಿಗೆ ಒಂದು ತಾಳದ ಗೊಂಬೆಯನ್ನು ಕೊಂಡುಕೊಟ್ಟಿದ್ದಳು. ಉಳಿದ ಹುಡು-ಗರು ತಾಯಿ ತಂದೆಯರ ನಡುವಿನ ಮೇಲೆ ಇದ್ದ ಹಾಗೆಯೇ ರಾಗ ಮಾಲಿಕೆ ಶಿಲ್ಪಿ, ಕೊಳಲು, ರಬ್ಬರ ಗೊಂಬೆ ಇವುಗಳನ್ನು ಕೂಗಿಸುತ್ತ ಬರು ವಾಗ್ಗೆ, ಹೆದರಿ ಹೆದರಿ ಜಾನತ್ತೆಯ ಕೊಂಕುಳಲ್ಲಿದ್ದ ಹುಡುಗನು ಕೂಗಿ ತಾಳ ಹಾಕಿಸುತ್ತ ಬಂದನು. ನದಿಯು ಸಮೀಪಿಸಿತು. ತುಂಗೆಯು ಹಾವಿನ

ಹಾಗೆ ಬುಸುಗುಟ್ಟುತ್ತಲಿದ್ದಳು. ಸೀತಕ್ಕನು 'ಏನಿರೆ! ಆ ತೇರು ಆದೇಕೆ ಹಾಗೆ ನಿಂತುಬಿಟ್ಟಿತ್ತು? ತಾಂತ್ರೀಕ, ಪಾಪ ಒಂದು ಹತ್ತುಸಲ- 'ಹರಿಕೆ ತಪ್ಪಿದೆ-ನೆಪ್ಪಿದ್ದರೆ ತರಬೇಕೂ ಎಂತ ಕೂಗಿದ' ಎನ್ನುವ ಹೊತ್ತಿಗೆ ಜಾನತ್ತೆಯು 'ಹೌದ್ರೆ! ಆಮೇಲೆ ಆಗವೀಕರು ಅನ್ನೋರು ದೇವಸ್ಥಾನದ ಪಾರುಪತ್ತೆಗಾರ್‍ರಿಂದೆ ತಪ್ಪು ಕಾಣಿಕೆ ಕಟ್ಟಿಸಿದರು.' ಜಾನತ್ತೆಯು ಅಂದು ಮುಗಿಸುವುದರಲ್ಲಿಯೆ, ಮೇಳಿಗೆಯ ನಾಗೂಬಾಯಿ ಸುಮ್ಮನಿರದೆ 'ಈಗಿನ ಕಾಲದಲ್ಲಿ ಮಂದಿ ಬಾಯಾಗೆ ಒಳ್ಳೆ ಮಾತುಗಳೇ ಬರೋದಿಲ್ಲ ಜಾನತ್ತೆ ನೀವಾದರೂ ತಪ್ಪುಕಾಣಿಕೆ ಕೊಡಲೊಂದಿತ್ತು' ಎಂದಳು.

ಜಾನತ್ತೆಗೆ ಬಲು ಸಿಟ್ಟು ಬಂದಿತು. ಸಿಡಿಮಿಡಿಗುಟ್ಟಿದಳು. ಇವರಿವರ ಮಾತುಗಳನ್ನು ನಿಲ್ಲಿಸಿ, ಕರಣೀಕರು 'ಗಂಗೇ ಪೂಜೆ ಮಾಡಿ, ಸಪ್ತಮೀ ಚಂದ್ರನ ಉದಯಕಾಲ. ತುಲಾಮಾಸದಲ್ಲಿ ಎಲ್ಲಾರ ಪಾಪಪುಣ್ಯಗಳನ್ನು ಚಿತ್ರಗುಪ್ತರು ತೂಕ ಮಾಡಿ ನೋಡುತ್ತಾರೆ. ತೆಂಗಿನಕಾಯಿಗಳನ್ನ ಇಲ್ಲಿ ಒಡೆದು ಅರಿಸಿನ ಕುಂಕುಮವನ್ನು ಉಕ್ಕಡಕ್ಕೂ ಏರಿಸಿ' ಎನ್ನುತ್ತ ಎಲ್ಲರ ಕೈಲೂ ಪಾಪಪರಿಹಾರಕ್ಕೆಂದು ಪೂಜೆ ಮಾಡಿಸಿದರು

ಗಾಳಿಯೆದ್ದೆ ಎದ್ದಿತು. ನಡು ನೀರಲ್ಲಿ ಉಕ್ಕಡವು ತಿರುಗಹತ್ತಿತು ಗರಗರ ತಿರುಗಲು—ಎಲ್ಲರ ತಲೆಗಳೂ ಸುತ್ತಿದವು. ಈ ಸುಳಿಯು ಎಲ್ಲಿದ್ದೀತು ಎಂದು ಅಂಬಿಗನಿಗೆ ತಿಳಿಯಲಿಲ್ಲ—ಗಣೆಗೆ ನೆಲವು ಸಿಗಲಿಲ್ಲ. ಸೆಳವು ಹುಟ್ಟಿಗೆ ಅಡವಾಗಲಿಲ್ಲ. ದೇವ್ಪೋಜಿಯು ಕೈಜೋಡಿಸಿ ನಿಂತು 'ತಾಯಿ ತುಂಗವ್ವ, ಏನಾರೂ ತಪ್ಪಿದ್ದಿತಾ, ಕಾಣಿಕ ಕಟ್ಟೇವು ಕಾಣವ್ವಾ ಈ ನನ್ನಾದೀರೆಲ್ಲ ನಿಂಗೆ ತಾಯೀ ತುಂಗವ್ವ ಅಂತ ಅಡವರಿಸಿ ಬಿದ್ದರಲ್ಲಾವ್ವ ಮುಡುವು ಕಟ್ಟೇನೌವ್ವ' ಎಂತ ಅಂಗಲಾಚಿ ಕೂಗಿಕೊಂಡನು. ಮುಪ್ಪಿನ ಮುದುಕ ದೇವ್ಪೋಜಿಗೆ ಕಣ್ಣಲ್ಲಿ ನೀರು ಬಂತು. ಗಂಟಲು ಕೂತೂ ಹೋಯಿತು. ಕುಳಿತಿದ್ದವರ ಕಡೆಗೆ ತಿರುಗಿ 'ನನ್ನಾವ್ವ ಸೀತವ್ವ ಯಾರಾರು ಹರಕೆ ತಪ್ಪಿದ್ದೀರಾ, ಕೊಡಿರೌವ್ವ ಕೊಡೋದಿದ್ರೆ. ಅಯ್ಯೋ ನನ್ನೊತ್ತೀಳೇ! ಇದಾಕಾದ್ರೂ ಹಿಂಗಿದ್ದಾವು. ಧಣೀ ನನ್ನೋವರೆ! ರಾಮುಪ್ಪ ಈಟೊಂದೂ ಜನ ಜವರಾಯನ ಪಾಲಾಗತಾರಲ್ಲ—ನಾನ್ಯಾಕಾದ್ರೂ ಈ ಬುಟ್ಟಿಗೆ ಮರಿ ಕೊಡದೆ ತೇಲ್ಕೊಟ್ಟಿದ್ದೇನು' ಎಂತ ಹಂಬಲಿಸಿ ಹಲುಬಿದನು.

ಶಿವರಾಮ ಕರಣೀಕರು ಮಾತನಾಡಲಿಲ್ಲ. ಸ್ನಾನದ ಪಂಜೆಯನ್ನು ತೆಗೆದು ನಡುವಿಗೆ ಬಿಗಿದು ನದಿಯ ಸೆಳೆವನ್ನು ನೋಡುತ ನಿಂತರು. ಹೆಂಗಸ ರಲ್ಲಿ ಗುಸಗುಸ ಪಿಸಿಮಾತು ಹೊರಟಿತು. ಮೇಳಿಗೆಯ ನಾಗೂಬಾಯಿ ಹೀಗೆಂದಳು. 'ಯಾರಾದರೂ ಏನಾದರೂ ಅಂದಿರಬೌದು. ಈ ಜಾಗ ಕೆಟ್ಟದು. ಜಾನಮ್ಮ ನಿಮ್ಮ ನಾಲಿಗೆ ಅಂಬೋದು ಕೊಂಚ ಮುಂದೆ ಉಚಾ ಯಿಸೋದು ಉಂಟಲ್ಲ ನನಗಂತೂ ಮಕ್ಕಳು ಮರಿ ಯಾರೂ ಇಲ್ಲ. ಗಂಗೇಲಿ ಮುಳುಕ್ಕೊಳ್ಳೋದು ತುಂಗೇಲಿ ಆದೀತು—ಈ ಮಂದಿಯೆಲ್ಲ ಸಾಯೋದು ಅಂದರೆ ನನಗೇಕೋ ಬಲು ಸಂಕಟವಾಗುತ್ತೆ. ಏನೇ ಜಾನತ್ತೆ' ಇಷ್ಟು ಕೇಳುತ್ತಲೆ ಜಾನತ್ತೆಗೆ ಬಲು ರೇಗಿತು. ಅವಳ ಹುಡುಗನು ತೊಡೆ ಯಮೇಲೆ ಹೊಸಿಕಾಡಿ 'ಅತ್ತೆ! ಗೊಂದೆಗೆ ನೀರು ಕುಚ್ಚಲೇ' ಎಂದು ಕನವರಿಸಿದನು. ಜಾನಮ್ಮಗೆ ಇನ್ನೂ ರೇಗಿತು. 'ಕೆಟ್ಟ ಕುರಡೆ! ನಿನ್ನಿಂದ ಇಷ್ಟೆಲ್ಲ, ಗೊಂಬೆಗೂ ಕುಡಿಸು, ನೀನೂ ಕುಡಿ' ಎಂದು ಹೇಳಹೇಳುತ್ತ ಆ ಪುಟ್ಟ ಹುಡುಗನನ್ನು ಕೈಲಿ ಹಿಡಿದು ಎತ್ತಿದಳು, ಉಕ್ಕಡವು ಜೋಲಿ ಹೊಡೆಯಿತು—ಹುಡುಗ ಕಸರಿಕೊಂಡು ನೀರಿನಲ್ಲಿ ಬಿದ್ದುಬಿಟ್ಟ. ಸೆಳವಿನಲ್ಲಿ ಸಿಕ್ಕಿ ಗರಗರ ತಿರುಗುತ್ತ ಇದ್ದನು.

ಎಲ್ಲರು ಹಾ ಹಾ ಎಂದು ಕೂಗಿದರು. ಗಾಳಿಯು ಮತ್ತೊಮ್ಮೆ ಬಲು ಜೋರಾಗಿ ಬೀಸಿತು-ದೊಡ್ಡದೊಂದು ಅಲೆಯೆದ್ದು ಒಂದು ಉಕ್ಕುಡದ ಮೇಲುರಿಡಿತು. ಅದರೊಂದಿಗೆ ಆ ಪುಟ್ಟ ಹುಡುಗನ ತಾಳದ ಗೊಂಬೆಯೂ ತೇಲಿಬಂದು ಜಾನತ್ತೆಯ ಕಾಲು ಬುಡದಲ್ಲಿ ಬಿದ್ದಿತು. ಜಾನತ್ತೆಯು 'ಅಯ್ಯೋ' ಎಂದು ಕೂಗಿ ಬಿದ್ದು ಹೊರಳಿದಳು. ಉಕ್ಕುಡವು ಬಲು ಅಲುಗಾಡಿತು. ದೇವೋಜಿಯು ಗಣೆಯಿಟ್ಟು ಉಕ್ಕಡವನ್ನು ನಿಲ್ಲಿಸಿದನು. ಗಾಳಿಯು ನಿಂತೇಹೋಯಿತು. ಸೆಳೆವೂ ನಿಂತಿತು. ಎಲ್ಲರೂ ಎದ್ದೆದ್ದು ನೋಡಿ 'ಜಾನತ್ತೆಯ ಮಗುವೆಲ್ಲಿ' ಎಂದರು

ಶಿವರಾಮ ಕರಣೀಕರು ಎದ್ದು ನೀರೊಳಗೆ ಧುಮುಕಿದರು. 'ಈಗ ಬಂದೆ' ಎಂತ ಮಾತ್ರ ಕೆಲವರಿಗೆ ಕೇಳಿಸಿತು. ಬಲು ಹೊತ್ತು ಕಾದರು, ಕರಣೀಕರು ಬರಲಿಲ್ಲ.

---

## ಅಶೋಕವನಾಲ    

ನಮ್ಮ ರಾಜನ ಮಗನಾದರೊ ಅರಮನೆಯಿಂದ ಹೊರಗಿರುವುದೇ ಹೆಚ್ಚಾಯಿತು ಬೇಟೆಯ ನೆವ. ಬೇಟೆಯಾಡಿದ್ದುದರೋ ಏನೇನೂ ಇಲ್ಲ. ಹುಲಿಯ ಚರ್ಮವಿಲ್ಲ. ಸಿಂಹದ ಕೇಸರಿಲ್ಲ. ಚಮರಿಯ ಬಾಲವಿಲ್ಲ. ಇದೇನು ಹೀಗೆ ನಿತ್ಯ ನಿತ್ಯ ಬೇಟೆಗೆಂದು ಹೊರಟನು. ವಿಕ್ರಮರಾಯನಿಗೆ ಬಲು ಜಿಗುಪ್ಸೆಯಾಯಿತು, ಸಿಟ್ಟು ಬಂದಿತು, ಹೆದರಿಕೆಯಾಯಿತು, ದುಃಖ ವಾಯಿತು. ಮಕ್ಕಳಿಲ್ಲದೆ ತಪಿಸಿ ಮಗನನ್ನು ಪಡೆದಿದ್ದಾನೆ. ಬದುಕಿಯಾನೆ ಎಂದು ಜಪಿಸಿ ಬದುಕಿಸಿಕೊಂಡಿದ್ದಾನೆ ಈಗ ಕೈಗೆ ಬರುವ ಕಾಲಕ್ಕೆ ಹೀಗೆ ಹೊರ ಹೊರಗೇ ಇದ್ದರೆ ಹೇಗೆ ತಾನೆ ಸುಮ್ಮನಿದ್ದಾನು. ಸಹವಾಸ ವೆಂಥದು ನೋಡೆಂದು ಮಂತ್ರಿಗೆ ಅಪ್ಪಣೆ ಮಾಡಿದನು. ಸಹವಾಸಿಗಳೆಲ್ಲರು ನಗರದಲ್ಲೆ ಇರುವರು. ನನ್ನ ಕುಮಾರನು ಮಾವನ ಮನೆಯಲ್ಲಿರುವನು. ದಳ ಪತಿಯ ಸುತನು ಪಡುವಲಲ್ಲಿ ಹೋರಾಡುತಲಿರುವನು. ರಾಜಪುರೋಹಿತರ ಮಗನು ಕಾಶಿಯಲ್ಲಿ ಓದುತಲಿರುವನು. ರಾಜಕುಮಾರನೊಬ್ಬನೇ ಬೇಟೆ ಗೆಂದು ಹೋಗಿಬರುತಲಿರುವನು.

ದೂತ—ಪರಾಕು ಮಹಾರಾಜ, ಕುಮಾರರು ಇನ್ನೂ ಮುನ್ನೂ ಬೇಟೆಯಿಂದ ಹಿಂತಿರುಗಿಲ್ಲ.

ರಾಜ—ಎಷ್ಟು ದಿನಗಳಾದವು ನಮ್ಮ ಕುಮಾರರು ಬೇಟೆಗೆ ಹೋಗಿ?

ದೂತ—ಕುಮಾರರು ಬೇಟೆಗೆ ಹೋಗಿ ನಾಲ್ಕು ದಿನಗಳಾದವು!

ಚಿಕ್ಕವಯಸ್ಸಿನ ರಾಜಕುಮಾರನು ಎಲ್ಲಿಗೆ ಹೋಗಿದ್ದಾನು?

ಮುದುಕರಾದ ತಾಯಿತಂದೆಯರ ಹಂಬಲೇ ಬರಬಾರದೇ. ರಾಜಾ ವಿಕ್ರಮ ರಾಯನು ಸಿಟ್ಟಾದನು. ಮಗನು ಒಂಟಿಯಾಗಿ ಕಾಡಿನಲ್ಲಿರುವದನ್ನು ನೆನೆದು ಹೆದರಿದನು. ನೊಂದನು, ಕಣ್ಣೀರ ಸುರಿಸಿದನು.

ಕೋಳಿ ಕೂಗುವ ಬಳಿಗೆ ಮಂತ್ರಿಯು ಮಕ್ಕಳೆಲ್ಲರೂ ಹೊರಟರು. ಅಶೋಕವನವು ಬಹಳ ದೂರವಿರಲಿಲ್ಲ !—'ಅಗೋ ಅಲ್ಲಿ ಯಾರೋ ಬಳಲಿ ಒರಗಿರುವರು ಗಂಡಸೋ ಹೆಂಗಸೋ ನೋಡಿರಿ. ಅವನೇ ರಾಜಕುಮಾರ!' ಬಲಾತ್ಕಾರವಾಗಿ ಅರಮನೆಗೆ ತರುವ ಹೊತ್ತಿಗೆ ಕುಮಾರನು ಹೊರಳಾಡಿ ಎಚ್ಚತ್ತನು. 'ಯಾರಲ್ಲಿ ?—ಯಾರದು ?-ಬಂದೆಯಾ—ಅಶೋಕ—ಅಶೋಕ ಮಾಲಾ' ಎಂದು ಕೂಗಿದನು. ಕಣ್ಣಾನೋಟವು ಸರಿಯಾಗಿರಲಿಲ್ಲ ವೈದ್ಯರು ಹೇಳಿದರು: 'ಅದು ಹೆಂಗಸಿನ ಹಂಬಲು.' ರಾಜನು ಡಂಗುರ ಹೊಡೆಸಿದನು. 'ಅಶೋಕಮಾಲೆಯು ಯಾರ ಮಗಳು ? ಅವಳು ಅರಮನೆಗೆ ಬರಬಹುದು' ಯಾರೂ ಬರಲಿಲ್ಲ. ಊರ ಹುಡಿಗಿಯರೆಲ್ಲರೂ ದುಃಖಿಸಿದರು.—ಅವರಲ್ಲಿ ಒಬ್ಬರಾದರೂ ಅಶೋಕಮಾಲೆ ಆಗಿರಲಿಲ್ಲ.

ಅರಸುಮಗನು ಆರೋಗ್ಯ ಪಡೆದನು. ಎಂದಿನಂತೆಯೆ ಇದ್ದವನು ನಿನ್ನೆ ಪುನಹ ಕುದುರೆಯನ್ನೇರಿ ಹೊರಟಿದ್ದಾನೆ. ವಿಕ್ರಮರಾಯನು ಕುರು ಬನ ವೇಷದಲ್ಲಿ ಹಿಂದೆಯೇ ಹೋದನು. ಅಶೋಕಪುಷ್ಪಗಳೆಲ್ಲೆಲ್ಲಿಯೂ ಹಾಸಿವೆ. ಹೂಗಳ ರಸವು ಇಳಿದು ಎಲೆಗಳೆಲ್ಲವು ಥಳಥಳಗುಟ್ಟುತ್ತಲಿವೆ. ಕುಮಾರನು ಕುದುರೆಯನ್ನಿಳಿದು ಒಂದು ಪಕ್ಕಕ್ಕೆ ಓಡಿದನು, ನಿಂತನು, ಹೆಜ್ಜೆಯ ಮೇಲೆ ಹೆಜ್ಜೆಯನ್ನಿಟ್ಟು ನಡೆದನು.

ಅಲ್ಲೊಂದು ಸೋಗೆಯ ಗುಡಿಸಲು—ಅಶೋಕ ದಳಗಳು ಉದುರಿ ಎಲ್ಲವೂ ಕೆಂಪಾಗಿದ್ದಿತು. ಬಾಗಿಲೊಳಗಿನ ಚಿಗರಿಯ ಮರಿಯನ್ನು ಕರೆಯುತ್ತ ಹತ್ತಿರದಲ್ಲಿದ್ದ ರಾಟಿಯನ್ನು ತಿರುಗಿಸುತ್ತ, ದಾರವನ್ನೆಳೆಯುತ್ತ ಬಾಯಲ್ಲಿ ಏನೋ ಗುನಗುನವೆನ್ನುತ್ತ ಅಲ್ಲಿ ಒಬ್ಬಳೇ ಹುಡಿಗಿಯು ಕುಳಿತಿದ್ದಳು. ರಾಜಕುಮಾರ ನಿನಗೆ ಅಲ್ಲಿ ಏನು ಕೆಲಸ ? ಮೆಲ್ಲ ಮೆಲ್ಲಗೆ ಹೋಗುವನೇಕೆ? ಅವಳನ್ನು ಮುಟ್ಟುವನೇ ? ಅಗೋ ಅವಳ ಕಣ್ಣು ಮುಚ್ಚಿದನು !

ಕುಮಾರನು ಕಣ್ಣುಮುಚ್ಚಿದನು-ಹುಡಿಗಿಯು ಕೈಗಳೆರಡನ್ನೂ ಸೆಳೆದು ಹಿಡಿದು ಹತ್ತಿರವಿದ್ದ ರಾಟೆಯ ದಾರದಿಂದ ಬೆರಳು ಬೆರಳುಗಳನ್ನು ಬಿಡಿಸಿ

ದಾರವನ್ನೂ ಸುತ್ತುತ್ತ ' ಅರಸರೆ, ಅಶೋಕದಳಗಳನ್ನು ನಡುವೆ ಸೇರಿಸಿ ಕಟ್ಟುತ್ತಲಿದ್ದೆನು ಆದರೆ ನೋಡಿ ಅವು ಇಷ್ಟು ಮೃದುವಾಗಿಯೂ ಇಲ್ಲ-- ಇಷ್ಟೊಂದು ಕೆಂಪಾಗಿಯೂ ಇಲ್ಲ. ಮುಂದೆ ಬಂದರೆ ನಾನು ತಮಗಾಗಿ ನೇದಿರುವ ಶಲ್ಯವನ್ನು ತೋರಿಸುವೆನು. ನಿಮ್ಮ ದಾಸಿಯು ಈ ಗುಡಿಸಿಲೊಳಗಡೆ ನೋಡಿದರೆ—ತಾವು ಈ ವನವನ್ನು ಬಿಟ್ಟು ಎಷ್ಟು ದಿನಗಳಾದುವೆಂದು ತಿಳಿಯುವುದು ನೀರು ತಂದು ಉಪಚರಿಸುವುದರಲ್ಲಿಯೇ ಓಡಿಹೋಗಬಹುದೇ—ತಾವರೆಯ ಎಲೆಗಳು ಯಾವವೂ ಕೈಗೆ ಸಿಗದೆ ನಿಧಾನವಾಯಿತು. ಆ ಬಾಡಿಹೋದ ಮಾಲೆಗಳನ್ನು ಎಣಿಕೆಮಾಡಿ ನೋಡಿರಿ—ನಿನ್ನೆಯದಿನದ ಹಾರವು ಇನ್ನಿನ್ನೂ ಬಾಡುತಲಿದೆ. ಈ ದಿನದ ಹಾರಕ್ಕೇ ಈಗೀಗ ದಾರವನ್ನು ನೂಲುತಲಿರುವೆನು. ' ರಾಜಕುಮಾರನು ಹುಸಿನಗೆ ನಗುತ್ತಿದ್ದನು.

ವಿಕ್ರಮರಾಯನು ರೇಗಿ ಸಿಂಹನಾದನು. ಕಿಡಿಕಿಡಿ ಬೆಂಕಿಯಾದನು. ಅಡವಿಯ ಪಾಲಾಯಿತೆ ಕುಮಾರನ ಪ್ರೇಮ ! ವೇದವತಿಯ ವಿದ್ಯೆಯೆಲ್ಲಿ, ಇಂದುಲೇಖೆಯ ಸೌಂದರ್ಯವೆಲ್ಲಿ, ನೀಲಾಲಕಿಯ ಕುಲಶೀಲಂಗಳೆಲ್ಲಿ ಎಂದು ಮರುಗಿ—' ಕುಮಾರ! ಇದೇನು ಈ ಅಡವಿಯಲ್ಲಿ ! ಆ ವಿಕ್ರಮಸಿಂಹನ ಕುಮಾರನೇ ನೀನು ? ಹೊರಡು ಮನೆಗೆ! ಶಂಕರಸಿಂಹ ಇವನನ್ನು ಹಿಂಗಟ್ಟೆ ಮುರಿಗಟ್ಟಿ ಪಾಲಕಿಯಲ್ಲಿಡು ' ಎಂದು ಅಪ್ಪಣೆ ಮಾಡಿದನು.

ಅಶೋಕಮಾಲೆಯು ಸಿಟ್ಟಾದಳು.—ಕುಮಾರನನ್ನು ಬಿಗಿದಪ್ಪಿ ಬಿಡೆನೆಂದಳು. ವನದಲ್ಲಿ ಬಿದ್ದು ಹೊರಳಿದಳು. ಹತ್ತಿಬಂದು ನಿಂತ ಚಿಗರಿಯನ್ನು ತಬ್ಬಿಕೊಂಡು ಕಣ್ಣೀರಿಟ್ಟಳು. ರಾಜಕುಮಾರನನ್ನು ಅರಮನೆಗೆ ಒಯ್ದರು.

ವಿಕ್ರಮಸಿಂಹನಿಗೆ ಮನದಲ್ಲಿ ಕಿಂಚಿತ್ತೂ ಶಾಂತಿಯಿಲ್ಲ ಕುಮಾರನು ಅಸ್ವಾವಸ್ಥೆಯಲ್ಲಿದ್ದನು. ಅಶೋಕಮಾಲೆಯರಲ್ಲದ ರಾಜಕುಮಾರಿಯರು ಹೊರಳಿ ಹೊರಳಿ ತಲೆದಿಂಬುಗಳನ್ನು ನೆನೆಸಿದರು. ' ಈ ವೃದ್ಧನಿಗೇಕೆ ಬುದ್ಧಿಯಿಲ್ಲ ಈ ಯುವಕನನ್ನು ಆ ಯುವತಿಗೆ ಒಪ್ಪಿಸಬಾರದೇಕೆ ? ' ಎಂದು ಊರವರೆಲ್ಲ ಕೂಗಿಬಿಟ್ಟರು.

ರಾಣಿಯು ನಡುನಡುಗುತ ಹಾಸಿಗೆಯ ಬಳಿ ಬಂದು ನಿಂತಳು. ' ಕುಮಾರಾ ಏನಿದು ! ನಿನಗೇನಿದು ಹುಚ್ಚು ? ' ಎಂದು ಕಣ್ಣೀರಿಟ್ಟಳು. ಕುಮಾರನು ಅತ್ತಕಡೆಗೆ ತಿರುಗಿ ನಿಟ್ಟುಸಿರು ಬಿಟ್ಟನು.

ನಡುರಾತ್ರಿಯ ಸಮಯ ಯಾವುದೋ ಹಕ್ಕಿಯು ಉದ್ಯಾನವನದಲ್ಲಿ 'ಸಿಕ್ಕಿದರೊ, ಸಿಕ್ಕಿದರೊ, ಸಿಕ್ಕಿದರೋ' ಎಂದು ಕೂಗಿತು. ರಾಜನು ಧಿಗ್ಗನೆದ್ದನು. ಉಸಿರಾಲೈಸಿ ನೋಡಿದನು. ಕುಮಾರನು ಉಳಿಯುವ ಹಾಗಿರಲಿಲ್ಲ. ಬೋಯಿಗಳನ್ನು ಬರಹೇಳಿದನು—ಮಂತ್ರಿಯನ್ನು ಕರೆಸಿದನು. ರಾಣಿಯನ್ನು ಹಿಂದಿರಹೇಳಿದನು. ಎಲ್ಲರೂ ಅಶೋಕವನಕ್ಕೆ ಹೊರಟರು. ಬೆಳದಿಂಗಳು ಸೂಸಿತ್ತು—ಪುಟ್ಟ ಪುಟ್ಟ ಝುರಿಗಳು ಅಡ್ಡಾದಿಡ್ಡಿಯಾಗಿ ಓಡಿಯಾಡುತಲಿದ್ದವು. ರಾಜನು ಆ ದಿನ ಕಂಡ ಗುಡಿಸಲು ಅಲ್ಲಿ ಇರಲಿಲ್ಲ. ಅದು ಬಿದ್ದು ಹೋಗಿದ್ದಿತು. ಪಾಲಕಿಯಿಳಿಸುವದೆಲ್ಲಿ? ರಾಣಿಯು ಮುಂದೆ ಬಂದಳು — 'ಅಲ್ಲಿ ಎಲ್ಲಿಯೋ ಧನಿ ಕೇಳಿಸುತಿದೆ. ನಡೆಯಿರಿ.' ಎಂದು ಮುಂದೆ ಹೊರಟಳು.

ವೃದ್ಧಳೊಬ್ಬಳು ಕಾಡುಹುಡಿಗೆಯೊಂದನ್ನು ತೊಡೆಯ ಮೇಲಿಟ್ಟು ಅಳುತಲಿದ್ದಳು. 'ತಾಯಿ, ಯಾವ ರಾಜಕುಮಾರನಿಗಾಗಿ ನೀನು ನರಳುವಿ. ಈ ಗುಹೆಯೆಲ್ಲ ನಿನ್ನೊಂದಿಗೆ ಮರಗುತಲಿದೆ. ಈ ಚಿಗರಿಯ ಮರಿಯು ಹುಲ್ಲು ನೀರು ಬಿಟ್ಟು ನಿಂತಿರುವುದು. ಈ ಸಂಕಟವನ್ನು ನೋಡೆಂದು ನನ್ನನ್ನು ದೇವರುಳಿಸಿದನ!'— ಎನ್ನುವಷ್ಟರಲ್ಲಿ ಪಾಲಕಿಗಳು ಆ ಗವಿಯ ಬಳಿಗ ಬಂದಿಳಿದವು.

ಅಶೋಕೆಯು ಚಟ್ಟನೆದ್ದಳು. 'ರಾಜಕುಮಾರ! ಹೊರಡೋಣ! ಬಂದೆಯಾ? ಹಾರಗಳೆಲ್ಲವೂ ಒಣಗಿಹೋದವು. ಈಗೀಗ ಅಶೋಕವೃಕ್ಷಗಳು ಹೂಬಿಡುವುದೂ ಇಲ್ಲ. ಇಷ್ಟು ದಿನಗಳ ಮೇಲಾದರೂ ನೆನಪಾಯಿತಲ್ಲವೆ? ಅಜ್ಜೀ! ವಾದ್ಯಗಳೆಲ್ಲಿ? ಅಜ್ಜೀ ಬೀಗರಿಗೆ ಔತಣ ಮಾಡು!' ಎಂದೆನ್ನುತ್ತ ನಡೆದುಹೋಗಿ ರಾಜಕುಮಾರನ ಪಾದಗಳ ಮೇಲೆ ಬಿದ್ದಳು. ಅರಸುಕುಮಾರನು ಒಂದು ಬಾರಿ ಹೊರಳಿದನು. ಎರಡು ಜೀವಗಳೂ ಒಂದಾಗಿ ಹಾರಿಹೋದವು. ಅಶೋಕವೃಕ್ಷದ ಬುಡದಲ್ಲಿ ಎರಡು ವೃಂದಾವನಗಳು ಕಂಡುಬಂದವು. ವಿಕ್ರಮರಾಯನು ಕರಗಿದನು. ಕೊರಗಿದನು. ತಾನು ಅರಸನೆಂಬ ಹೆಮ್ಮೆಯು ಅಳಿಸಿಹೋಯಿತು. ನೆಲದಲ್ಲಿ ಬಿದ್ದು ಹೊರಳಾಡಿದನು.

---

## ಸೋಬಾನಿ

ಇದು ಸುಳ್ಳಲ್ಲ. ಬರೀ ಕತೆಯಂತೂ ಅಲ್ಲವೇ ಅಲ್ಲ ಕತ್ತೆಯ ಜೀವನ ಚರಿತ್ರೆ. ನಡೆದ ವಿಚಾರವೇ ಹೌದು. ಇಲ್ಲದೆ ಇದ್ದರ ನಮಗೆಲ್ಲಿಯ ಧೈರ್ಯ! ಆ ಸುಡುಗಾಡು ಕತ್ತೆಗಳು—ಆ ಪ್ರಾಣಿವರ್ಗಕ್ಕೇ ಹೀನಾಯಗಳಾದ ಗಾರ್ದಭಗಳ ವಿಚಾರವೆತ್ತಲು ನಮಗೇನರಿ ಕಾರಣ.

ಅಂತು ಅದು ಕತ್ತೆ. ನಿಮ್ಮ ನೆನಪಿನಲ್ಲಿರುವ ರಂಗಪುರವೇ ಅದು. ಆ ಊರಲ್ಲಿಗೆ ಈಗ ರೈಲು ಮಾರ್ಗವೂ ಹೋಗಿದೆ. ಅಗಸರ ನಿಂಗ ಇಸ್ತ್ರಿ ಪೆಟ್ಟಿಗೆ ಬಿಸಾಟು, ಬಾವುಟ ಕೈಲಿ ಹಿಡಿದ. ಮೈಲಿಗೆ ಬಟ್ಟೆ ಸಾಕಾಯ್ತು, ರೈಲು ಚಾಕರಿ ಬೇಕಾಯ್ತು. ಏನೇನು ಬಿಟ್ಟರೂ, ಒಂದು ಕತ್ತೆ—ಮುದ್ದಾದ ಕತ್ತೆಮರಿ, ಅವನ ಮನಸ್ಸಿಗೆ ಅಂಟಿಕೊಂಡೇ ಬಿಟ್ಟಿತು. ಮುದ್ದಾಗಿ ಸಾಕಿದ ಅದನ್ನು. ಅದಕ್ಕೆ ಮುತ್ತು ಕೂಡ ಕೊಡುತಲಿದ್ದ ಯಾರೂ ಇಲ್ಲದೆ ಇದ್ದಾಗ. ಸಂಜೇಲಿ ಮುಂಜೇಲಿ, ಅವರಿಬ್ಬರೇ ಇದ್ದರಂತೂ ಬಿಡಿ, ಮಾತಾಡಿದ್ದೇ ಆಡಿದ್ದು. ಒಳಗಿರೋಳಲ್ಲ ನಿಂಗನ ಹೆಂಡತಿ. 'ಇದಾರ ಸಂಗ ಈಟೊಂದು ಮಾತು, ಇದ್ಯಾವಳೋ ಬಂದಳಲ್ಲ, ನನ್ನ ಮೇಲಿನ ಭೋಡೀಗೆ' ಎಂದು

ಹಿಟ್ಟು ತೊಳಸುತ್ತ, ರೊಟ್ಟಿ ತಟ್ಟುತ್ತ ನೋಡುವಳು. ಕತ್ತೆ ಆಡಿದ್ದು ಕೇಳ ವಲ್ಲದು, ನಿಂಗ ಆಡಿದ್ದು ಕೇಳುತಿತ್ತು. ಒಂದು ದಿನ ಹೆಂಡತಿ ಸಿಟ್ಟಾದಳು, ಉರಿಯೋ ಕೊಳ್ಳಿಯಾರಲು, 'ಏನೆಲ್ಲ ಮಾಡೀರ ನೀವು, ನಾ ಮಾಡಿದ್ದ ರೊಟ್ಟಿ ಪಿರೀತಿಂದ, ಅದನ್ನ ಆ ಕಂಗಾಳಿ ಕತ್ತೆಗೆ ಇಟ್ಟೀರಾ. ಮುತ್ತು ಕೊಟ್ಟೀರಾ ಅದಕ್ಕೆ ಮುಟ್ಟಿಸಿಕೊಂಡೇನೆ, ನಿಮ್ಮ, ನಾನು, ಇನ್ನು ' ಎಂದು ಬೈದಾಡಿದಳು.

ಆದಿನ ಕಳೆದ ಮೇಲೆ, ರಂಗಿ, ಆ ನಿಂಗನ ಮಡದಿ, ಮುಟ್ಟಿಸಿಕೊಂ ಡಳೊ ಹೇಗೊ, ಅದೆಲ್ಲ ನಮಗೇಕೆ? ಅಂತು ಕತ್ತೆಗೆ ಆನಂದ. ನಿಂಗನ ಪ್ರೀತಿಯ ಕಂದನಾಯ್ತು ಆ ರಾಸಭ.

ಹಿಂಗಾಲು ಮುಂಗಾಲು ಕಟ್ಟುವರಾರು ಅದಕ್ಕೆ? ಅದು ಯಾವಾ ಗಲೂ ಅವನ ಸಂಗಡವೇ ಇರುವುದು. ರಾತ್ರಿಯೆಲ್ಲ ಬೆಚ್ಚಗೆ ಮನೆಯ ಒಳಗೇ ಮಲಗುತಲಿತ್ತು. ಅದಕ್ಕೆ ಏನೆಂದು ಹೆಸರು ಇಡಬೇಕು? ತಿಳಿಯದಾಯ್ತು.

ಒಂದು ದಿನ ಅದನ್ನು ಕಂಡುಕೊಂಡ. ಊಟ ಮಾಡಿ ಅಂದರೆ ಉರುಫ್ ಮುದ್ದೆ ನುಂಗಿ—ತಂಬಾಕು ತಿನ್ನುತ್ತ ನಿಂಗ ಕುಳಿತಿದ್ದ. ಲೋಕಲ ಗಾಡಿ ಬರುವ ಸಮಯ. ಆ ಹೊತ್ತಿಗೆ, ಆ ಕತ್ತೆ ಆ ಕಡೆಯಿಂದ, ಹಿತ್ತಲ ಬಾಗಿಲಿಗೆ ಕೂಗಿಕೊಂಡು ಹೋಯಿತು. ಯಾಕೆ, ಏನು, ಎಂತ ಆಲೈಸಿದ. ಅದರ ಹತ್ತಿರ ಮಾತನಾಡುತ ಇದ್ದಳು ಅವಳ ಅಂಗೈಲಿದ್ದ ಈರುಳ್ಳಿ ಬೆಲ್ಲ ತಿನ್ನುತಲಿತ್ತು ಆ ಕತ್ತೆ. ಆಶ್ಚರ್ಯವಾಯಿತು. ಹಿಂದುಗಡೆಯಿಂದ ಹೋದ. ತಮಾಷೆಗೆ ಗದ್ದರಿಸಿದ. ಹೆದರಿ ತಿರುಗಿದಳು ರಂಗಿ. 'ಏನೇ ಯಾರ ಹತ್ತಿರವೇ ಮಾತು? ಓಡಿಸಿಬಿಟ್ಟೇನು ಅಡಿಗೇಮನೆ ಬಿಡಿಸಿ!' ಅವಳೇಕೆ ಹೆದರ್‍ಯಾಳು, 'ಓಟೇ ಹೋಯ್ತು ಮರ್‍ಯೋಯ್ತು ಮಸೀ ಮಡಿಕೇಲಿ ಬಾನ ಬಸಿಯೋದೆ ತಪ್ಪಿತು, ನಾನು ನಿಮ್ಮ ಸೋಬಾನಿ ಸಂಗಾತೀಲಿ, ನಿಮ್ಮ ಸೋಭಾನೆ ಕೇಳಿಕೊಂಡು ಇರತೀನಿ. ನೀವು ಬಾವುಟ ಬೀಸುವಾಗೆಲ್ಲ, ನಿಮ್ಮ ಜೊತೇಲೇ ಇರತೀನಿ. ರೈಲು ಬರೋದು ತಡ ಆದ್ರೆ ಈ ಹಾಳು ಮುಸುಡಿ ಅಪ್ಪಿಗೊಂಡು ಕೂತಿರುತೀರಲ್ಲ! ಬಾವುಟ ಬಲಗೈಲಿ, ಇದರ ಕಿವಿ ಸಂದೀಲಿ ಎಡಗೈ. ಆ ಮರಗೈ ಬಗ್ಗಿಸಿಕೊಂಡು ಕಂಬ ನಿಂತಿರಾಣ, ಟೇಷನ್‌ದಾಗೆ ಮಾಸ್ತರು

ನೋಡತೇ ಇರೋಣ ನನ್ಯಾಕೆ ಮದಿವ್ಯಾದ್ದೂ. ನಮ್ಮನೇವ್ರು ನನ್ನ ಒಂದು ಕತ್ತೆಗಾದ್ರು ಕೊಟ್ಟು ಮದಿವೆ ಮಾಡಿಲ್ಲ ' ಹೀಗೆ ಹೀಯಾಳಿಸಿದಳು.

ನಿಂಗನ ಮನಸ್ಸು ಎಲ್ಲೊ ಏನೋ. ' ಆದಿರಲೆ, ಮುಚ್ಚಂಜೆ ದೀಪ ಹಚ್ಚಿಸಿದಾಗ ಹೇಳೂವಿ. ಈಗ ಬೊಗಳೆ, ಅದೇನಂತಕ ರೀತಿ ಈ ಕತ್ತೆಯ ಮರಿಯು ? ' ಈ ಮಾತು ಕೇಳಿ ರಂಗೀಗೆ ಹೇಗಾಗಿದ್ದೀತು ? ಹೇಳಿದಳು— ' ನಿಂದು, ಈ ಕತ್ತೆ, ಈ ಬಿಳಿ ಮುಸುಡಿ, ಈ ಹಣೆದಾಸಿ, ಈ ಕರಿಗಿವಿ, ಈ ನಿಮ್ಮ ಸೋಬಾನಿ ! ' ' ಹಾ ! ಎಂದ ನಿಂಗ ' ಎಲ್ಲಾಕಿಂತ ಸೋಬಾನಿ ಚೆಂದಾಗೈತಿ ' ಎಂದುಕೂಂಡ.

ದುಡದುಡನೆ ಹೋದ ರೈಲ್ವೆ ಸಿಲ್ದಾಣಕ್ಕೆ. ಅಧಿಕಾರಿಗಳಿಂದ ಬೇಗದ ಕೈ ತೆಗದುಕೂಂಡು ಬಂದು, ಕೈ ಬೀಳಿಸಿ ನಿಂತ ' ನೋಡೋಣ ಹೊಸ ಹೆಸರ—' ಎಂದ ರೈಲಿನ ಹೊಗೆ ದೂರದಲ್ಲಿ ಮೇಯುತ್ತ ಇತ್ತು ಕತ್ತೆ. ' ಸೋಬಾನೀ, ಸೋಬಾನೀ ! ' ಎಂತ ಕೂಗಿದ. ರಂಗಿ ಅರೆಬಾಗಿಲು ಮಾಡಿ ಕೊಂಡು ಜೋಳ ಬೀಸುತ್ತ ಇದ್ದವಳು ಹಾಗೇ ದುರುಗುಟ್ಟಿ ನೋಡಿದಳು. ಕತ್ತೆ ಎಲ್ಲಿತ್ತೋ ಏನೋ ನಾಗಾಲೋಟದಿಂದ ಓಡಿ ಬಂದೇ ಬಂದಿತು. ರಂಗಿಗೂ ಕೂಡ ಆನಂದ, ತಾನು ಹಾಸ್ಯಕ್ಕೆ ಇಟ್ಟ ಹೆಸರೇ ಸ್ಥಿರವಾಯಿ ತಲ್ಲ ಎಂದು.

ಸೋಬಾನಿ ಬಂದು, ಒಳಿಯಲ್ಲಿ ನಿಂದು, ಕಿವಿ ಅಲ್ಲಾಡಿಸಿ, ತಲೆ ಕೊಡವಿ, ಹಿಂಗಾಲು ಹಾರಿಸಿ, ಬಾಲ ಎತ್ತಿ ಕಿರಿಚುವುದಕ್ಕೆ ಆರಂಭಿಸಿತ್ತು. ಅಷ್ಟುಹೊತ್ತಿಗೆ ಪಾಯಿಂಟಿನ ಕಬ್ಬಿಣದ ಹಿಡೀ ಮೇಲೆ ಕುಳಿತಿದ್ದವನು, ಆ ನಮ್ಮ ನಿಂಗ ದಢಕ್ಕನೆ ಎದ್ದು ಹೋಗಿ, ಬಾಲ ಎಳೆದು ಹಿಡಿದ. ಕತ್ತೆ ಕೂಗೋದು ಬಿಟ್ಟು ನಿಂಗನ್ನ ಮೂಸಿ ನೋಡಿತು.

' ನೀನೇನೋ ಕತ್ತೆ ನಿಜ. ನಮಗ ಓದನೋ ಉಪಾದ್ರೂ ಹೇಳಿ ಟ್ಟದ್ದೂ ನಿಜ—ಕತ್ತೆ ಕಿರುಚುವುದು—ಎಂತ. ನಾನು ನಿನಗೆ ಹೊಸ ಹೆಸರಿ ಡಿಸಿ ಲಕ್ಷಣವಾಗಿ ಕರೆದರೆ—ಹೈಕಿ ಸೈಕಿ—ಎಂತ ಕಿರುಚುವುದೇನು ಚಂದ ? ಅಲ್ಲಿ ರೈಲಿಂಜನ್ ಕೂಗಸ್ತಾ ಇದ್ದಾನೋ ಹೇಗೊ ಈ ಕತ್ತೆ ಜೊತೆಲೀ ಇದ್ದಾಗ್ಗೆ, ಆ ದೊಡ್ಡ ಕತ್ತೆ ಹೊಟ್ಟೇಕಿಚ್ಚಿಗೆ ಕಿರಚಿಗೊಳ್ಳದೆಲೆ, ನಾನು ಬಾವುಟ ಬೀಸೋಕೆ ಮುಂಚೇಲೆ ಒಂದುಬಿಟ್ಟೀತು. ಸೋಬಾನಿ, ನೀನು

ಕೂಗುತಿ ಆದ್ದರಿಂದ ನಿನ್ನ ನೀಳಾ ನೀಟಾದ ಬಾಲದ ಗೊಂಡೇ ಚೌರೀನ ಎರಡು ಜಡೆ ಮಾಡಿ ಈ ಪಾಯಿಂಟು ಹಿಡೀಗೆ ಕಟ್ಟಿರತೀನಿ; ಇದನ್ನ ಒದೀಬೇಡ. ಬಾವುಟ ಬೀಸೋಕ್ಕೆ ಹೋಗಲ? ' ಎಂತೆಲ್ಲ ಹೇಳಿಕೊಂಡು ಹೊರಟ.

ಆದೇನು ಆಶ್ಚರ್ಯವೋ ಕಾಣೆ ನಿಂಗ ಕೈಮರ ಬಗ್ಗಿಸಿದ ಕೂಡಲೆ ರೈಲು ಕೂಗೋದು. ಅವನು ಬಾವುಟ ಹಿಡಿದು ಹಸರು ತೋರಿಸಿದ ಕೂಡಲೆ ಅದು ಒಳಗೆ ನುಗ್ಗಿಬಿಡೋದು. ಅವನಿಗೆ ರೈಲು ಬರಿಸೋದು ಹೋಗಿಸೋದು ಅಂದರೆ, ರೈತರ ಮನೇಲಿ ದನ ಕಟ್ಟಿದ ಹಾಗೆ, ದನ ಬಿಚ್ಚಿದ ಹಾಗೆ.

ರಂಗೀಗೆ ಜೋಳಾ ಬೀಸೋದು, ರಾಗೀ ಒಡೆಯೋದು, ಹುರುಳಿ ತಿರುವೋದು, ರೊಟ್ಟಿ ಚಟ್ನಿ, ಕಾಫಿ, ಮೊದಲಾದ್ದೆಲ್ಲ ಕಾಯಿಸಿ ಬೇಯಿಸಿ ಮಾಡುವ ಕೆಲಸ. ನಿಂಗನಿಗಾದರೋ ಏಳೋದು ಚರಿಗೇಲಿ ನೀರೇ ತೊಕ್ಕೊಂಬೋದು, ಅಂಬಲಿ ರೊಟ್ಟಿ ಉಂಬೋದು, ಮುಂಜಾನೆ ರೈಲಿಗೆ ಹೋಗೋದು ಮಾಸ್ತಾರ್ರ ಹತ್ತಿರ ಬೀಗದಸಳ ಇಸಗೊಳ್ಳೋದು, ಬೀಗ ತಕ್ಕೊಳ್ಳೋದು, ಬಾವುಟ ಬೀಸೋದು, ರೈಲು ಬರಿಸೋದು, ಜನ ಇಳ ಸೋದು, ಯಾರಾದರೂ ಕೂಲೀ ಕರದರೆ ಹೋಗೋದು, ಮತ್ತೆ ಮನೆಗೆ ಬಂದು ಕೂತಿರೋದು ಸೂರ್ಯ ಮೂಡ್ದಾಗ್ಗೆ ಏಳೋದು, ಪಡೂಲಿ ಮುಳಗಿದಾಗ್ಗೆ ಮಲಗೋದು ಹೀಗೇ ಕಾಲ ಸಾಗಿತು.

ಒಂದು ದಿನ ಮಾತ್ರ ಎಲ್ಲ ಬದಲಾವಣೆ ಆಯಿತು. ಆ ದಿನವೋ ಶಾನಭೋಗರ ಮನೇಲಿ ಮದಿವೆ ಮನೆತನದ ಆಗಸ ಹೋಗಬೇಕಾಗಿ ಬಂತು. ಆ ದಿನ ಎರಡು ಮೂರು ಬಾರಿ ಹೋಗಿ ಬಂದ. ಕಡೆಗೆ ನಾಲ್ಕನೇ ಬಾರಿಗೂ ಕಡ್ಡಾಯವಾಗಿ ಹೋಗಲೇಬೇಕಾಗಿ ಬಂತು. ಲೋಕಲಗಾಡಿ ಬರೋ ಹೊತ್ತು. ಕೈಮರದ ಕೀಲೀ ತೆಗೆದುಕೊಂಡು ಬಂದು, ಬೀಗ ತೆಗೆದು, ಪದ್ಧತಿ ಪ್ರಕಾರ, ಸೋಬಾನಿಯ ಸೊಗಸಾದ ಬಾಲದ ಗೊಂಡೇ ಚೇರಿಗೆ ಎರಡು ಜಡೆ ಹೆಣೆದು ಅದನ್ನ ಪಾಯಿಂಟು ಹಿಡಿಗೆ ಬಿಗಿದು ಕುಳಿತಿದ್ದನು. ಆ ಸಮಯಕ್ಕೆ ಮದಿವೆಯ ಮನೆಯಿಂದ, ಮೀರಲಾಗದ ಕರೆಬಂತು. ಹೆಂಡತಿ ರಂಗಿ ಕೂಡ ಓಡಿ ಬಾದಳು. ' ಸೋಬಾನಿ, ನನ್ನವ್ವ, ಓಡಿ ಬರತೇನೆ ಈಗ,

ನೋಡಿಕೋ ನನ ದೇವೀ, ಕೋಟೀ ದುರಗವ್ವ, ಹೋಳೀಗಿ, ಪೀಳೀಗಿ, ತಂದೇನು ನಿಂಗಾಗಿ. ಇದೊ ಬಂದೆ....'ಎಂದು ಹೊರಟವನು, ಮತ್ತೆ ಹಿಂದಕ್ಕೆ ಹೋಗಿ ಹಸುರು ಬಾವುಟ ಬಂದ ಹೊತ್ತಿಗೆ ಕಾಣುವ ಹಾಗೆ ಕೈಗಿರಲಿ ಎಂದುಕೊಂಡು, ಅದನ್ನು ಸೋಬಾನಿಯು ಕೊರಳಿಗೆ ಗೆಜ್ಜೇಪಟ್ಟಿಯ ಮೇಲ್ಭಾಗದ ಕೊಂಡಿಗೆ ಬಿಗಿಯಾಗಿ ಸಿಕ್ಕಿಸಿ ಹೊರಟುಹೋದನು.

ಶಾನುಭಾಗರ ಮನೆಯಲ್ಲಿ ಭಾರಿ ಚಪ್ಪರ ಹಾಕಿದ್ದಾರೆ. ಬಹಳ ನೆಂಟರು ನೆರೆದಿದ್ದಾರೆ ಈ ಅಗಸರ ಮಗನ್ನ ಕೇಳುವರಾರು ? ಲೋಕಲ-ಗಾಡಿ ಬರುವ ಹೊತ್ತು. ಗಾಡಿ ತುಂಬ ಜನ ಇರುತ್ತೆ. ಈ ಚಪ್ಪರ ತುಂಬಿ ಆಗಿ ಮಿಗುತ್ತೆ. ಇಷ್ಟೊಂದು ಜನ ಬಂದು ಹೋಗಲು ಯಾರ ಕೈವಾಡ ? ನಿಂಗಂದು. ಇವನು ಹಸುರು ಬೀಸಿದರೆ ಅಷ್ಟೊಂದು ಜನವನ್ನು ಹೊಟ್ಟೆ-ಯಲ್ಲಿಟ್ಟುಕೊಂಡ ಆ ಮಹಾ ಬೆಂಕಿಯ ಸರ್ಪ ಬರಬೇಕು, ಮತ್ತೊ ಕೆಂಪು ಬೀಸಿದರೆ ನಿಲ್ಲಬೇಕು ಆದರೂ ಕೂಡ ಇಲ್ಲಿ ಚಪ್ಪರಕಂಬದಡಿ ನಿಂಗ-ನಾರು ? ಅಗಸರ ನಿಂಗ ಮಾತ್ರ.

ಹೊತ್ತಾಯಿತು. ಎದ್ದ— 'ಬುದ್ದೀ, ಸ್ವಾಮೀ, ಶಾನಭಾಗ ಸರ-ಕಾರ್ರೇ, ನನ್ನ ಕೆಲಸದ ಬಾಯಾಗೆ ಮಣ್ಣು ಬಿದ್ದೀತು, ಹೊರಟೇ ' ಎಂದು ಕೂಗಿದ. ಒಳಗಿನಿಂದ ಒಂದು ಮಗುವು ಗೆಜ್ಜೆಗಾಲಲ್ಲಿ ಪುಟ ಪುಟ ಓಡಿ ಬಂದು ' ಇಂಗ, ತಿಂಗು ' ಎಂದು ಒಂದು ಹೋಳಿಗೆ ತಂದಿತು. ' ಇಸ-ಗೊಳ್ಳಪ್ಪ ' ಎಂದಳು ಒಳಗಿನಿಂದ ಮದುವಣಗಿತ್ತಿ. ಸಿಂಗ ತಿಂದ. ' ಸಾಕು ನಮ್ಮಪ್ಪ ಶಾನುಭಾಗರಿಗೆ ಹೋಗಿ ಹೇಳಿಬಿಡಿ, ನಾನು ರೈಲು ಬರಿಸೋ ಹೊತ್ತು ಬಂತು ರಂಗೀ ಕೈಲಿ ಎಲ್ಲ ಕಳಿಸಿ ' ಎಂದು ಮತ್ತೊಮ್ಮೆ ಹೇಳಿ ಓಡಿಬಂದುಬಿಟ್ಟ

ಅಗ್ರಹಾರ, ಪೇಟೆ, ದೇವಸ್ಥಾನಗಳ ಮುಂದೆ ಬಂದರೆ ಯಾರಾದರೂ ಮಾತನಾಡಿಸಿಯಾರೆಂದು, ಯಾರಿಗೂ ಕಾಣದ ಸಂದಿ ಗೊಂದಿ ಹೂಕ್ಕು ಓಡಿ ಬಂದು ಬಿಟ್ಟ.

ಸ್ಟೇಷನ್ ನಾಲ್ಕು ಹೆಜ್ಜೆಯಿದೆ. ಮಾಸ್ಟರು ನಿಂತಿದಾರೆ ಯಾರ ಕೈಲೋ ಮಾತನಾಡುತ್ತ. ಎಲ್ಲೆಲ್ಲೂ ಗದ್ದಲ. ನಿಟ್ಟಿಸಿ ನೋಡಿದ. '**ಗಾಡರ್!**' ನಿಂಗನಿಗೆ ಎದೆ ಜಿಚ್ಚಿಹೋಯಿತು. ರೈಲು ಬಂದು ತುಸ ಅತ್ತಕಡೆ ಹೋಗಿ

ನಿಂತಿವೆ; ನಿಂಗನಿಗೆ ಪ್ರಾಣಹಾರಿಹೋಯಿತು ಕೈಕಾಲು ಬಿದ್ದುಹೋಯಿತು. ಹೇಗೋ ಕಾಲು ಹಾಕಿದ. ಟಿಕೆಟ್ಟು-ಗೇಟು ಹತ್ತಿರ ಬಂದ. ಎಡವಿ ಬಿದ್ದುಬಿಟ್ಟ.

ಸ್ಟೇಷನ್‌ಮಾಸ್ಟರು ತಿರುಗಿ ನೋಡಿದರು 'ಎಲ್ಲಿ ಹೋಗಿದ್ದೆ ನಿಂಗಾ?' ಎಂದರು. ಗಾರ್ಡು ನಕ್ಕರು. 'ಇರಲಿ ಬಿಡಿ. ಈ ಸಾರಿ ಸಂಬಳ ಆ ಕತ್ತೆಗೇ ಕೊಡಿಸಿದರಾಯಿತು' ಎಂದರು. ನಿಂಗನಿಗೆ ದಿಗಿಲ್ ಎಂತ ಒಳಗೊಳಗೆ! 'ಅದೇನು ಕತ್ತೆಯ ವಿಚಾರ ಬಂತು. ಸೋಬಾನಿ ಏನು ಮಾಡಿತೊ! ಯಾರನ್ನಾದರೂ ಒದ್ದೇಬಿಟ್ಟಿತೋ, ಏನು ಗತಿ!' ಎಂದುಕೊಂಡನು. ಹಾಗೇ ತಿರುಗಿ ನೋಡುತ್ತಾನೆ ಅಲ್ಲಿ ಜನದ ಗುಂಪು ಅದರ ನಡುವೆ ಸೋಬಾನಿ ಇತ್ತು. ತಾನು ಹೊದಿಸಿದ್ದ ರೇಶ್ಮೆ ವಸ್ತ್ರ ಮೈಮೇಲೆ ಹಾಗೇ ಇತ್ತು. ಸಿಕ್ಕಿಸಿದ್ದ ಹಸುರು ಬಾವುಟ ಹಾಗೇ ಬಿಚ್ಚಿಗೊಂಡು ಹಾರಾಡುತ್ತಿತ್ತು. ಜನರಾದರೋ ಹೊತ್ತು ಮಾರುವವರಿಂದ ಕೊಂಡುಕೊಂಡು ಬಿಸ್ಕತ್ತು ಬಾಳೇಹಣ್ಣು, ಪೇಪರಮೆಂಟು ತಿನ್ನಿಸುತ್ತಲಿದ್ದರು.

ಏನೂ ತೋಚದೆ ನಿಂತುಬಿಟ್ಟ ನಿಂಗ. ಕಡೆಗಂದರು ಸಿಲ್ದಾಣದ ಅಧಿಕಾರಿಗಳು 'ನಿಂಗಾ, ಬಾವುಟ ಇಸುಗೊ, ನಿನ್ನ ಕತ್ತೆ ಕಡೆಯಿಂದ, ರೈಲು ಹೋಗಲಿ ಗಂಟೆ ಹೊಡೆದು, ಸಿಗ್ನಲು ಕೊಡು ಮೊದಲನೇ ಕಲಸ ಅದೇ ಮಾಡಿಬಿಟ್ಟಿದೆ ನಿನ್ನ ಪುಣ್ಯ ಈ ದಿನ ನಿನ್ನ ಕತ್ತೆಯಿಂದ, ನಾನು ಒದು-ಕಿದೆ, ನನ್ನಿಂದ ನೀನು ಉಳಿದೆ ನಡೆ ಹೋಗು, ಚಲೋ ಕಲಸ ಮಾಡಿದಿ' ಎಂದು ಅರ್ಧ ನಿಟ್ಟು, ಕಾಲು ನಗು, ಇನ್ನು ಕಾಲು ಆಕ್ಷೇಪಣೆಯಲ್ಲಿ ಹೇಳಿದರು. ಗಾರ್ಡು ನಕ್ಕು 'ಹೋಗಲಿ ಬಿಡಿ ಪಾಪ ಏನೋ ಎಲ್ಲ ಹೋಗಿದ್ದಾನೋ. ಆದರೂ ಅಂಥ ಕತ್ತೆ ಇತ್ತಲ್ಲ ಅವನ ಬದಲಿಗೆ' ಎಂದು ಮರುಗಿದರು.

ಅಂದಿನ ಸಂಜೆಯ ಸೂರ್ಯ ಆ ಊರಲ್ಲಿ ಅಷ್ಟೊಂದು ಉತ್ಸಾಹವನ್ನು ಎಂದೆಂದೂ ಕಂಡಿರಲಿಲ್ಲ ಊರೆಲ್ಲೆಲ್ಲ ಮೆರವಣಿಗೆ ಮಾಡಿಬಿಟ್ಟರು ಆ ಸೋಬಾನಿಗೆ, ಹೂವಿನ ಹಾರಗಳ ಹೊದ್ದಿಕೆಯಲ್ಲಿ, ಅದು ಹೂವಿನ ಕತ್ತೆಯಾಗಿಬಿಟ್ಟಿತು ಉಳಿದ ಕತ್ತೆಗಳಿಗೆಲ್ಲ ಹೇಗಾಗಿದ್ದೀತು ಆಗ. ದೇವರೇ ಬಲ್ಲ ಆ ಮೂಕಜಂತುಗಳ ಮನಸ್ಸನ್ನು!

ಮನೆಗೆ ಬಂದಕೂಡಲೆ, ರಂಗಿಯೂ ಅದನ್ನ ತಬ್ಬಿ ಮುದ್ದಾಡಿಬಿಟ್ಟಳು. 'ನನ್ನ ದೇವಿ, ನನ್ನ ಮ್ಮ, ನನ ಸೋಬಾನಿ ಸುಬಾನೇ ತಂದಿಯಲ್ಲ. ನನ್ನಾ-ತನ ಜೀವ ಉಳಿಸಿದೆಯಲ್ಲಮ್ಮ, ನನ್ನ ಕೊರಳ ಕಟ್ಟಾಣಿ, ನನ್ನ ತಾಳೀ ಬಾಗ್ಯ.' ಎಂತೆಲ್ಲ ಹೊಗಳಿದಳು.

ಕತ್ತೆ ಬೆಪ್ಪಾಗಿ ನಿಂತುಬಿಟ್ಟಿತು. 'ನಾನು ಏನು ಮಾಡಿದ್ದೇನು? ಇವರ್‍ಯಾಕೆ ಹೀಗೆ ಗೋಳಾಡಿಸುತ್ತಿದ್ದಾರೆ ನನ್ನ? ನಾನಿನ್ನೇನು ಮಾಡಿದೆ, ರೈಲು ಕೂಗಿದ ಕೂಡಲೆ ಇನ್ನೊಂದಾವುದೋ ಕತ್ತೆ ಅಂದುಕೊಂಡು ಹಿಂಗಾಲು ಹಾರಿಸಿದೆ. ಯಾವುದೊ ಧಡಕ್ಕಂತು, ಹೆಗಲಮೇಲೇನೋ ಪಟಪಟ ಎಂತು. ಇಷ್ಟೇ ನನಗೆ ತಿಳಿದಿರೋದು' ಇಷ್ಟೇ ಆದರೂ ನಿಂಗ ನಿಗೆ ಅದು ಮಹತ್ತಾಗಿತ್ತು. ರಂಗಿ ಕೇಳಿದಳು 'ನಿಂಗ ನೀನೂ ಕೂಡ ಮುದ್ದಾಡಿದ್ಯಾ ಸೋಬಾನೀನ?' 'ಇನ್ನೇನ ಮಾಡಲಿ ಮತ್ತೆ' ಎಂದನು ನಿಂಗ ರಂಗಿ ಮತ್ತೆ ಮತ್ತೆ ಕತ್ತೊರಸಿಕೊಂಡು—'ಏನಾದರೂ ಮಾಡು ನಾನಂತೂ ಈ ದಿನ ಶಾನುಭಾಗರ ಮನೇ ಹೋಳಗೀ, ಪರಮಾನ್ನ, ಲಡ್ಡು, ಫೇಣೀ, ಎಲ್ಲ, ನಮ್ಮ ಮನೇ ಸೋಬಾನೀಗೇ ಕೊಡತೇನಿ, ನಿನಗಲ್ಲ ಕಂಡ್ಯಾ!' ಎಂದು ಎದ್ದುಹೋದಳು ನಿಂಗ ಹಾಸ್ಯವಾಗಿ ಹೇಳಿದ 'ನಿಂಗೀ, ಅದು ಕರಗಿವಿ, ಬಿಳಿ ಮುಸುಡಿ, ಸೊಟ್ಟಗಾಲು, ಕತ್ತೆ ಅಲ್ವೇನೇ?'

ರಂಗಿ ಒಳಗಿಂದ ಗಮಘಮಿಸುವ ತಿಂಡಿ ತುಂಬಿದ ಬುಟ್ಟಿಯನ್ನು ತಂದವಳೆಂದಳು—'ಯಾಕಾದೀತು ಅದು ನನ್ನ ಭಾಗ್ಯ, ನನ್ನ ಸೋಬಾನಿ. ಇಂದು ನೀನು ಕತ್ತೆಯಾಗಿ ನನ್ನ ಮನೆ ಹಾಳುಮಾಡಿಬಿಡುತಿದ್ದಿ. ಸೋಬಾನಿ ನನ್ನ ಭಾಗ್ಯವಾಗಿ ಉಳಿಸಿತು, ನಿನ್ನ ಮಾನ, ನನ್ನ ಪ್ರಾಣ. ಇವತ್ತು ಅದು ತಿಂದು ಮಿಕ್ಕದ್ದನ್ನೇ ತಿನ್ನು ನೀನು'

ಇದು ನಡೆದುದಲ್ಲವೆಂದು ಯಾರ್‍ರಿ ಅನ್ನುವರು! ಸೋಬಾನಿಯ ಚಿತ್ರವನ್ನು—ಟೈಮ್ಸ್ ಆಫ್ ಇಂಡಿಯ ಪತ್ರಿಕೆಯವರು, ರೇಲ್ವೆ ಇಲಾಖೆಯವರ ಹೇಳಿಕೆಯ ಮೇರೆಗೆ ಪ್ರಕಟಿಸಿದ್ದನ್ನು ನೀವು ನೋಡಲಿಲ್ಲವೆ? ನೋಡದಿದ್ದರೆ ನೋಡಿ ಆ ರೈಲ್ವೆ ಸ್ಟೇಷನ್ನಲ್ಲಿ ಇನ್ನು ಮೇಲೆ ಕತ್ತೆಗಳನ್ನು ಹೀನಾಯವಾಗಿ ಕಾಣಬಾರದು ಕಂಡಿರಾ!

---

## ಮುದ್ದು ರಾಮು ൟ ൟ ൟ ൟ

ಮನೆಯ ಹಿತ್ತಿಲಲ್ಲಿ ಒಂದು ಮಾವಿನ ಮರವಿತ್ತು. ಮಳೆಗಾಲದಲ್ಲಿ ಒಂದು ಬಾರಿ ಆಲಿಕಲ್ಲು ಬಿತ್ತು. ಅಮ್ಮ, ಅಚ್ಚಕ್ಕ, ನೆರೆಮನೆ ರಂಗು— ಎಲ್ಲರೂ ಇಲ್ಲೊಂದು ಅಲ್ಲೊಂದು ಟಪುಟಪು ಬಿದ್ದ ನಾನು, ಆಲಿಕಲ್ಲು ಆರಿಸಿಕೊಂಡು ಬಂದು ಸೂರಿನ ಕೆಳಗಡೆ ನಿಂತು ಬಾಯಿಗೆ ಹಾಕಿಕೊಳ್ಳುತ್ತಲಿದ್ದೆವು. ಆಗ ಧಡೇರೆಂದು ಶಬ್ದವಾಯಿತು ಮಾವಿನ ಮರ ಬಿತ್ತು. ಓಹೋ ಬನ್ನಿ ಬನ್ನಿ ಎಂತ ಎಲ್ಲರೂ ಓಡಿಹೋದೆವು. ಅಷ್ಟು ಹೊತ್ತಿಗಾಗಲೆ ಅಪ್ಪ ಹೋಗಿ ಪಣ್ಣಾರಿಸುತ್ತಲಿದ್ದನು. ಹಳೇ ಮರ. ಯಾರಿಗೂ ಬಾಧೆ ಕೊಡದೆ ಬಿತ್ತಲ್ಲ ಎಂದು ಅಪ್ಪನಿಗೂ ಅಮ್ಮನಿಗೂ ಸಮಾಧಾನ.

ನಾನು ಹಣ್ಣಾರಿಸುವ ನೆವದಲ್ಲಿ ಮರದ ಕೊಂಬೆಗಳನ್ನೆಲ್ಲ ಅರಗು ಮಾಡಿಕೊಂಡು ಆ ಮರದ ಮೇಲೆ ಬೆಳೆದಿದ್ದ ಶ್ರೀತಾಳದಂಡೆ ಹೂವನ್ನ ಕುಯ್ಯಲು ಹೋದೆನು. ಅಲ್ಲಿಗೆ ಹೋದೆನೋ ಇಲ್ಲವೊ ಚಿಯ್ಯೋ ಚಿಯ್ಯೋ ಎಂತ ಕೂಗು ಕೇಳಿಸಿತು. ಅಲ್ಲೊಂದು ಪೊಟರೆಯಿತ್ತು. ಅದರೊಳಗೆ ನೋಡಿದರೆ ಒಂದು ಪುಟ್ಟದೊಂದು ಮರಿಯಿತ್ತು. ಪಂಚೆಯ ಶರಗಿನಲ್ಲಿ ಅದನ್ನು ಹಗುರವಾಗಿ ಸುತ್ತಿ ಹಿಡಿದು ತಂದೆನು.

ಅಚ್ಚಕ್ಕ ಅದನ್ನ ನೋಡಿ ಇಲೀಮರಿ, ಇಲೀಮರಿ ಎಂತ ಕೂಗಿ ಚಪ್ಪಾಳೆಪೊಡೆದಳು. ' ಎರಡೇ ಕಾಲಿದೆ. ಇದೇನೆ ಅಮ್ಮ ? ಎಂತ ಅಮ್ಮ

ನನ್ನು ಕರೆದಳು. ಅಮ್ಮ ಅಪ್ಪ ಎಲ್ಲರೂ ಒಂದು ನೋಡಿ ಅದು ಪಂಚರಂಗಿನ ಗಿಳಿಯುಮರಿಯೆಂದು ಹೇಳಿ—ಒಂದು ಕೈಲು-ಬುಟ್ಟಿಯೊಳಗೆ ಒಂದಿಷ್ಟು ಹರಕು ಬಟ್ಟೆ ಹಾಕಿ ಅದರಲ್ಲಿ ಆ ಮರಿಯನ್ನ ಬೆಚ್ಚಗಿಟ್ಟರು. ಆ ಗೂಟಕ್ಕೆ ನೇತುಹಾಕು ' ಎಂತ ಅಪ್ಪ ಹೇಳಿದ

ಅಚ್ಚಕ್ಕ ಅದನ್ನ ಬಿಟ್ಟು ಹೋಗವಲ್ಲಳು. ಊಟಕ್ಕೆ ಕೂತಾಗ ಹತ್ತಿರ ಕೂರಿಸಿಕೊಂಡು ಅದಕ್ಕೆ ಅನ್ನ ತಿನ್ನಿಸಬೇಕು ಎಂತ ಅಸಳಾಸೆ.

' ಅಯ್ಯೋ ಭ್ರಾಂತಿ ಅದು ಅನ್ನ ತಿನ್ನುತ್ತೆಯೆ—ಅದಕ್ಕೆ ಹಾಲು ಹಾಕಬೇಕು. '

ಅವರ ಮನೆಯ ಗಿಳಿ ಮೆಣಸಿನಕಾಯಿ ತಿನ್ನುತ್ತೆ—ಹೋಗಲಿ ಬಿಡು, ಆ ಕಾಸಿದ ಹಾಲು ಕೊಡು, ಬೇರೇನೂ ಕೊಡೆ ' ಯೆಂದು ಅಚ್ಚಿಯು ಕುಣಿದಾಡಿದಳು. ಒಂದೆರಡು ಸಾರಿ ಆ ಮರಿ ಚೆಂವ್ ಅಂದ ಹಾಗೆಲ್ಲ ಹಾಲು ಹಾಕಹೋದಳು. ಆ ಹಾಲು ಅದರ ಮೂಗಲೆಲ್ಲ ಬಂದುಬಿಟ್ಟಿತು. ಅಚ್ಚಿಗೆ ಗಾಬರಿಯಾಗಿ, ಅಮ್ಮನ ಕೈಲಿ ಕೊಟ್ಟಳು ಅಮ್ಮನು ಅದಕ್ಕೆ ಹತ್ತಿಯಲ್ಲಿ ಬತ್ತಿಮಾಡಿ ಅದರಲ್ಲಿ ಹಾಲು ಕುಡಿಸಿದಳು. ಆ ರಾತ್ರಿ ನಮಗಾರಿಗೂ ನಿದ್ರೆಯೇ ಇಲ್ಲ. ಗಿಳಿಮರಿ ನೋಡಿಕೊಳ್ಳುವ ಗದ್ದಲ. ಅದಕ್ಕೆ ಸುಖವಿಲ್ಲ, ನಮಗೆ ನಿದ್ದೆಯಿಲ್ಲ!

ಅಂತು ಇಂತು ಒಂದು ತಿಂಗಳು ಕಳೆಯಿತು—ಗಿಳಿಮರಿಗೆ ಅಲ್ಲೊಂದು ಇಲ್ಲೊಂದು ಗರಿ ಮೊಳಕೆಯಾಯಿತು. ಅಚ್ಚಕ್ಕ ಅದು ಕೆಂಪು-ಇದು ಹಸುರು, ಇದು ಹಳದಿ ಎಂತೂ ಐದು ಬಣ್ಣ ಬರಲೇಬೇಕಲ್ಲ ಎಂದು ಗುರು-ತಿಟ್ಟು ನೋಡುತ್ತಿದ್ದಳು. ಇಷ್ಟು ಹೊತ್ತಿಗೆ ಹಿಂಸೆ ಮಾಡಿ ಅಪ್ಪನ ಕೈಯಿಂದ ದುಡ್ಡು ಹಾಕಿಸಿ ಒಂದು ಪಂಜರವನ್ನು ತಂದೆವು.

ಗಿಳಿಯ ಮರಿಯು ಏನೇನ ಮಾಡಿದರೂ ಅದರೊಳಗೆ ಹೋಗದು. ' ಬೆಕ್ಕಿನ ಕಾಟ ಒಂದಿಲ್ಲದಿದ್ದರಪ್ಪ ಹೊರಗೇ ಇರಲೀಂತ ಅನ್ನಬಹು-ದಾಗಿತ್ತು. ಬಿಡೊ, ಅಣ್ಣ! ಅದು ಮನೆಯಲ್ಲೇ ಹಾರಾಡಿಕೊಂಡಿರಲಿ! ನಾನೂ ಇಸ್ಕೂಲಿಗೆ ಹೋಗಿಬಿಟ್ಟರೆ—ನೀನೂ ಹೋಗಿಬಿಟ್ಟರೆ—ಅಪ್ಪ ತಿರುಗಾಟ ಹೋಗಿಬಿಟ್ಟರೆ—ಅಮ್ಮಗೆ ಬೇಜಾರಾಗುತ್ತೆ—ಅಲ್ಲವೆ? ಅದ್ಯಾಕೆ ಬೇಜಾರಾಗುತ್ತೆ! ನಮ್ಮ ಮುದ್ದು ರಾಮು ಇರುತ್ತಲ್ಲ. ಅದು ಹಾಲ ಕರೀ

ಬೇಕಾದರೆ—ಅಡಿಗೇ ಮಾಡಬೇಕಾದರೆ ಜೊತೇಲೇ ಹಾರಿಕೊಂಡಿರುತ್ತೆ—ಅಮ್ಮಯ್ಯ ಅಗ್ಗಣ್ಣಿ ಮಾಡೇ—ಕರೂ ಬಿಡೇ ಅಮ್ಮಯ್ಯ ಅಂತೆಲ್ಲ ನಾವಾಡಿದ ಹಾಗೆಯೇ ಆಡುತ್ತೆ ಅಲ್ಲವೊ? ಸರಿ. ಈಗ ಮಾತ್ರ ಒಳಗಿರು ಮುದ್ದು' ಎಂದು ಉಪಚಾರ ಮಾಡಿ ಒಳಗಿಟ್ಟೆವು. ಬಾಗಿಲು ಹಾಕಿ ಕಡ್ಡಿ ಸಿಕ್ಕಿಸಿದೆವು.

ಒಂದು ದಿನ ಬೆಳಗ್ಗೆ ನಾನು ಸ್ಕೂಲಿಂದ ಬರುವ ಹೊತ್ತಿಗಾಗಲೆ, ಅಚ್ಚಕ್ಕನು ಬಂದು ಪಂಜರದ ಹತ್ತಿರ ನಿಂತುಕೊಂಡು ಗಿಳಿಯ ಮುಂಗ ಪಾಠ ಹೇಳುತ್ತಿದ್ದಳು—'ಧರಣಿಮಂಡಲ' ಬೇಕೋ 'ಕಿರುತಾರೆಗ' ಬೇಕೋ ಮುದ್ದು—ಮುದ್ರಾಮೂ ಅಂತ ಕೇಳಿದ ಹಾಗೆಲ್ಲ ಅದು ಆ ಕಡೆ ತಲೆವೋರೆ ಮಾಡಿ 'ಹೂಂ, ಅಚ್ಚಕ್ಕ' ಎನ್ನುತ್ತಲಿತ್ತು.

'ಹುಚ್ಚುಮುರುವಿ, ಅದಕ್ಕೆ ಅದೆಲ್ಲ ಯಾತಕ್ಕ' ಎಂತ ಅಮ್ಮ ಎಂದಳು. ಆದರೂ ಅಚ್ಚಕ್ಕನ ಆಶೆಯೇ ಬೇರೆ. ಇಸ್ಕೂಲಲ್ಲಿ ತಾನು ಒಪ್ಪಿಸಬೇಕಾದ ಪದ್ಯವನ್ನೆಲ್ಲ ಗಿಳಿಗೆ ಹೇಳಿಕೊಟ್ಟಿರುವದು. ಗಿಳಿಯು ಮರೆಯುವುದಿಲ್ಲವಷ್ಟೆ! ಇನಸ್ಪೆಕ್ಟರು ಬಂದಾಗ ಅದನ್ನು ಮಡಲಲ್ಲಿಟ್ಟು ಕೊಂಡು ಹೋಗುವುದು. ಸ್ವಲ್ಪ ಸ್ವರ ಎತ್ತಿದರೆ ಸಾಕು ಗಿಳಿ ಪೂರ್ಣ ಹೇಳಿಬಿಡುವುದು. ನಂಬರು ಬರುತ್ತೆ. ಮೇಲಕ್ಕೆ ಕಳುಹಿಸುವರು. ಇನಾಮು ಬರುತ್ತೆ—ಹೀಗೆಲ್ಲ ಹುಚ್ಚಾಬಟ್ಟೆ ಅಚ್ಚಕ್ಕನ ಯೋಚನೆ.

ಅಚ್ಚಕ್ಕನಿಗೆ ಪ್ರತಿಯಾಗಿ ಏನಾದರೂ ಮಾಡಬೇಕೆಂದು, ನಾನು ಅವಳಿಗೆ ತಿಳಿಯದ ಹಾಗೆ ಗಿಳಿಯನ್ನೂ ಅಟ್ಟಕ್ಕೆ ತೆಗೆದುಕೊಂಡು ಹೋಗಿ, ಪಾಠ ಹೇಳಿಕೊಡುತ್ತಿದ್ದೆನು. ನನ್ನ ಕಂಡಾಗ ಮಾತ್ರ ನಾನು ಹೇಳಿ ಕೊಟ್ಟದ್ದನ್ನು ಹೇಳುತ್ತಿದ್ದಿತು. ಮತ್ತೊಂದು ದಿನ ಅಚ್ಚಕ್ಕನು ಹೆಮ್ಮೆಯಿಂದ ಗಿಳಿಯನ್ನು ತಂದು 'ನಾನು ಇದಕ್ಕೆ ಮಗ್ಗಿ ಹೇಳಿಕೊಟ್ಟಿದ್ದೇನೆ' ಎಂದಳು.

'ಮುದ್ದು ರಾಮು ಅಚ್ಚಕ್ಕನ್ನ ಮಾತಾಡಿಸು' ಎಂದೆನು. ಆಗ ಅದು ಅಚ್ಚಿ ಹೇಳಿಕೊಟ್ಟದ್ದನ್ನ ಮರೆತು—'ಮುತ್ತು ಕೊಟ್ಟೇನು—ಕತ್ತೆ ಹೇಳೆ, ಅಚ್ಚಿ ಮುತ್ತ ಕೊಟ್ಟೇನೆ' ಎಂದಿತು. ಅಚ್ಚಿಗೆ ಬಲು ರೇಗಿತು. ಅಳುತ್ತ ಓಡಿ ಹೋದಳು. ಅಂದಿನಿಂದ ಎರಡು ಮೂರು ದಿನ ಅವಳು ಗಿಳಿಯನ್ನು ಮುಟ್ಟುತ್ತಲಿರಲಿಲ್ಲ.

ನಾಲ್ಕಾರು ವರುಷಗಳು ಕಳೆದವು. ಪಂಚರಂಗಿನ ಗಿಳಿಗೆ ನಾವಿನ್ನೇ-ನನ್ನೂ ಹೇಳಿಕೊಟ್ಟಿರಲಿಲ್ಲ. ಆದರೂ ಅದು ಏನೇನೋ ಹೊಸದಾಗಿ ಹೇಳಿತು. ಅಚ್ಚು ತನ್ನ ಮದುವೆಗೆ ಜೊತೇಲಿ ಇದ್ದು ಹೇಳುವುದಕ್ಕೆ ಉರಟಣೆ ಹಾಡು ಹೇಳಿಕೊಟ್ಟಿದ್ದೆ. ಒಂದು ಅವಳನ್ನು ಕರೆದು ಹಾಸ್ಯಮಾಡಿದಳು. ಅವಳು ನಾಚಿ 'ಇಲ್ಲಪ್ಪ' ಎಂದಳು.

ಅಪ್ಪ:—ಮತ್ತೆ ಗಂಡ ಬಂದಾಗ್ಗ ಜೊತೇಗೆ ಹೇಳೋರು ಯಾರು?

ಅಮ್ಮ:—ಇಲ್ಲ ಕಣೆ ಕೇಳು ಏನೇನು ಹೇಳುತ್ತೆ.

ನಾನು ಆಗ ಅದನ್ನ ಕೈಮೇಲೆ ಕೂರಿಸಿಕೊಂಡು 'ಏನೋ ಮುದ್ರಾಮು—ಅಚ್ಚೀಗೆ ಮುತ್ತು ಕೊಟ್ಟೇಯ?' ಎಂದೆನು. ಆಗ ಅಚ್ಚಿಯು 'ಮಾಡಿ ಹಾಸ್ಯ ಮಾಡಿ' ಎಂತ ಅಳುವುದರಲ್ಲಿದ್ದಳು. ಗಿಳಿಯು ತಲೆಮೇಲೆಮಾಡಿ 'ಸದ್ದೂ, ಸದ್ದೂ ಎದ್ದಾರೋ, ಸದ್ದೂ, ಸದ್ದೂ ಎದ್ದಾರೋ' ಎಂದಿತು. ಇದನ್ನು ಯಾರು ಹೇಳಿಕೊಟ್ಟವರು. ನಾವಾರೂ ಏನೇನೂ ಈ ಮಾದ್ರಿಯಾಗಿ ಹೇಳಿಕೊಟ್ಟಿರಲಿಲ್ಲ ಹಾಗಾದರೆ ಯಾರು ಕಲಿಸಿದವರು?

ಆಗ ಅಚ್ಚಕ್ಕನ ಮದುವೆಗೆ ಬೇಕಾದಷ್ಟು ಒಡವೆ, ಉಡುಗೊರೆ ಒಟ್ಟೆಗಳನ್ನು ತಂದುಹಾಕಿದ್ದರು. ಅವನ್ನೆಲ್ಲ ಜೋಡಿಸಿಟ್ಟು ನಾನು ಹೊರಗಡೆ ಕೋಣೆಯಲ್ಲಿ ಮಲಗಿದ್ದೆನು. ಗಿಳಿಯ ಪಂಜರವನ್ನು ಚೌಕಿಯ ಮನೆ ಕಿಟಿಕಿಗೆ ಎದುರಾಗಿ ನೇತುಹಾಕಿದ್ದೆವು. ಅರ್ಧ ರಾತ್ರಿಯ ಸಮಯಕ್ಕೆ ಏನೋ ಬೆಳಕು ಹತ್ತಿ ಆರಿದ ಹಾಗಾಯಿತು. ಮಿಣುಕು-ಹುಳುವೆಂದು ನಾನು ಸುಮ್ಮನಿದ್ದೆ. ಮುದ್ದುರಾಮು ಎಚ್ಚತ್ತು ರೆಕ್ಕೆ ಬಡಿಯಿತು. 'ಅಚ್ಚಿ ಮುತ್ತು ಕೊಟ್ಟೇನು ಕತೆ ಹೇಳೇ' ಎಂತ ಎರಡು ಮೂರು ಸಾರಿ ಹೇಳಿ ಸುಮ್ಮನಾಯಿತು ಹೊರಗೆ ಮತ್ತೊಂದು ಸಾರಿ ಬೆಳಕಾಯಿತು—ಪಿಸಿ ಮಾತಿನ ದನಿ ಕೇಳಿತು: ಸದ್ದೂ ಸದ್ದು ಎಂತ ಒಬ್ಬನೆಂದರೆ—ಇನ್ನೊಬ್ಬನು 'ಯಾರೋ ಎದ್ದಿದ್ದಾರೊ ನಡಿ' ಎಂದ ಹಾಗಾಯಿತು—ನಾನು ಅಪ್ಪನ್ನ ಕೂಗಿದೆ, ಅಷ್ಟೊತ್ತಿಗೆ ಹಜಾರದಲ್ಲಿ ಪಟಾಪಟ ಹೆಜ್ಜೆಯ ಸದ್ದಾಯಿತು. ಆ ರಾತ್ರಿ ಕೈಗೆ ಯಾರೂ ಸಿಗಲಿಲ್ಲ.

ಬೆಳಗ್ಗೆ ನಮ್ಮೆಲ್ಲರಿಗೆ ಎಷ್ಟೋ ಸಂತೋಷ—ಮುದ್ದು ರಾಮು

ನಮ್ಮನ್ನ ಬದುಕಿಸಿತು ಎಂದುಕೊಂಡೆವು—ಪೋಲೀಸಿಗೆ ತಿಳಿಸಿಸಿ ಚಾಂದಿ ಯನ್ನು ರಾತ್ರಿ ಮನೆಯಲ್ಲಿ ಮಲಗಿಸಿಕೊಂಡು ಒಂದೆರಡು ದಿನ ಕಾದೆವು. ಗಿಳಿಯು ಎರಡು ರಾತ್ರಿಯೂ ಸುಮ್ಮನೇ ಇತ್ತು.

ಮೂರನೆಯ ರಾತ್ರಿ ನಮಗೆಲ್ಲ ಜೊಂಪು ಹತ್ತಿತ್ತು—ಆಗ ಮುದ್ದು ರಾಮುವು—'ಸದ್ದೂ! ಸದ್ದೂ! ಎದ್ದಿದ್ದಾರೆ!' ಎಂದು ಎರಡು ಮೂರು ಸಾರಿ ಹೇಳಿತು—ನಾನು ಸುಳುವು ತಿಳಿದು ಪೋಲೀಸಿನವರನ್ನು ಎಬ್ಬಿಸಿ ದೆನು. ಅಂತು ಆ ದಿನ ಐದು ಜನ ಕಳ್ಳರನ್ನು ಹಿಡಿದರು.

ಇಷ್ಟೊಂದು ಸಹಾಯಮಾಡಿದ ಗಿಳಿಯನ್ನು ನೋಡಬೇಕೆಂದು ಕಛೇರಿಯಲ್ಲಿ ಅಧಿಕಾರಿಗಳು ಹೇಳಿದರು. ನಾನದನ್ನು ತರಿಸಿದೆನು. ಆದರೆ ಅದು ಎಲ್ಲವನ್ನೂ ಮರೆತು ಮೂಕಾಗಿತ್ತು—ನಾನು ಕೈಗೆ ತೆಗೆದುಕೊಂಡ ಮೇಲೆ 'ಅಚ್ಚಕ್ಕ ಮುತ್ತ ಕೊಟ್ಟೇನು. ಕಥೆ ಹೇಳೆ' ಎಂದು ಎರಡಾ- ವರ್ತಿ ಹೇಳಿತು. ಆಗ ಕಳ್ಳರ ಪೈಕಿ ಒಬ್ಬನು ಹಲ್ಲುಕಡಿದು ಗೊಣಗಿದನು. 'ಆ ಭೂತವೇ ನಮಗೆ ವಂಚನೆ ಮಾಡಿದ್ದು!'

ಈ ಕಥೆಯೆಲ್ಲ ನಡೆದು ಬಲು ವರ್ಷಗಳಾದುವು. ಅಚ್ಚಕ್ಕ ಈಗ ನಾಲ್ಕುಮಕ್ಕಳ ತಾಯಿ—ಈಗಲೂ ಕೂಡ ಅವಳು—ಮುದ್ದುರಾಮು ಏನು ಬೇಕೋ?' ಎಂದರೆ 'ಕಥೇ ಹೇಳೆ' ಎನ್ನುವುದು. ಅವಳದನ್ನು ಪಂಜರ ದಿಂದ ಈಚೆಗೆ ತೆಗೆದು ಕೈಮೇಲೆ ಕೂರಿಸಿಕೊಂಡು 'ನೀನೇನು ಕೊಡುವಿ ಯಪ್ಪ! ನನಗೆ?' ಎನ್ನುವಳು. ಅದು 'ಮುತ್ತು ಅಚ್ಚಕ್ಕ' ಎನ್ನುವುದು.

ನಿನ್ನೆಯ ದಿನ ಸಂಕ್ರಾಂತಿಯ ಹಬ್ಬ. ಎರಡುಮೂರು ದಿನದಿಂದ ಕೊರಗುತ್ತಿದ್ದ ಮುದ್ದು ರಾಮುವು ಈಗ ಕಣ್ಣು ಮುಚ್ಚಿಕೊಂಡಿದೆ. ಸಾಯುವುದಕ್ಕೆ ಮುಂಚೆ—'ಅಚ್ಚ, ಅಚ್ಚಕ್ಕ ಕಥೆ ಹೇಳೇ? ಸದ್ದೂ ಸದ್ದು ಎದ್ದಿದ್ದಾರೆ' ಎಂದು ರೆಕ್ಕೆ ಬಡಿದು ನನ್ನ ಹಾಸಿಗೆಯ ಮೇಲೆ ಸತ್ತುಬಿದ್ದಿದೆ.

ಈಗ ತಾನೆ ಅಚ್ಚಕ್ಕನ ಕಡೆಯಿಂದ ಪುಟ್ಟದೊಂದು ಬಾರಿಗಿ ಬಂತು. 'ಮುದ್ದುರಾಮೂ ಕಾಲಿಗೆ ಇದನ್ನು ಇಡು' ಎಂದು ಒಂದು ಪುಟ್ಟ ಬಂಗಾರದ ಗೊಲಸನ್ನು ಕಳಿಸಿದ್ದಾಳೆ. ಅವಳಿಗೆ ಏನು ಉತ್ತರ ಬರೆಯಲಿ?

---